VEERASAIVA GRANTHAMALA SERIES NO. 1.

# PARAVĀDI GAJĀNKUSA TĀRĀVALI

BY



NEELAKANTĀRYA DĒVA.

ನೀಲಕಂಠಾರ್ಯದೇವಕೃತ

# ಪರವಾದಿ ಗಜಾಂಕುಶ ತಾರಾವಳಿ.

---

ಮೈಸೂರ:
ಸ್ಟಾರ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟಿತು.
1900.

---



ಕ್ರಯ ೧೦ ಆಣೆ,

# ಉಪೋದ್ಘಾತ.

ಈ ಗ್ರಂಥವನ್ನು ಎರಡು ಓಲೆಯ ಪ್ರತಿಗಳಿಂದ ಮುದ್ರಿಸಲಾಯಿತು. ಈ ಎರಡು ಪ್ರತಿಗಳು ಬಹುಶಃ ೨೦೦ ಅಥವಾ ೨೫೦ ವರ್ಷಗಳ ಹಿಂದೆ ಬರೆದವುಗಳಂತೆ ತೋರುತ್ತವೆ.

ಈ ಗ್ರಂಥದಲ್ಲಿ ಹಾಡಿನ ರೂಪದಲ್ಲಿರುವ ಸೂತ್ರಗಳನ್ನು ಸಣ್ಣಾಕ್ಷರದಲ್ಲಿಯೂ, ಅವುಗಳ ಟಿಪ್ಪಣವನ್ನು ದಪ್ಪಕ್ಷರದಲ್ಲಿಯೂ ಮುದ್ರಿಸಿರುತ್ತೇವೆ. ಟಿಪ್ಪಣದಲ್ಲಿ ಅನುವಾದ ಮಾಡಲ್ಪಟ್ಟಿರುವ ವೇದ, ಪುರಾಣ, ಆಗಮ, ಉಪನಿಷತ್ತು ಇವೇ ಮೊದಲಾದ ಪ್ರಮಾಣಗಳನ್ನು " " ಎಂಬ ಚಿಹ್ನೆಗಳಿಂದಲೂ, ಆ ಪ್ರಮಾಣಗಳ ಟೀಕೆಯು ಇಷ್ಟರವರೆಗೆ ಇರುವುದೆಂಬುದನ್ನು ಸ್ಪಷ್ಟವಾಗಿ ತಿಳಿಯಪಡಿಸುವುದಕ್ಕೋಸ್ಕರ ( ) ಎಂಬ ಚಿಹ್ನೆಗಳಿಂದಲೂ ಪ್ರತ್ಯೇಕಿಸಿರುತ್ತೇವೆ. ಮತ್ತು ಟಿಪ್ಪಣದಲ್ಲಿ ವಿಷಯವಿಭಾಗವನ್ನು ತಿಳಿಯಪಡಿಸಲು ಪ್ಯಾರಗ್ರಾಫ್ (Paragraph) ಎಂಬ ವಿಭಾಗವನ್ನು ಮಾಡಿರುತ್ತೇವೆ. ಅವಶ್ಯಕವಾಗಿ ತೋರಿಬಂದ ಕಡೆಯಲ್ಲಿ ಸಂಕ್ಷೇಪವಾದ ಟಿಪ್ಪಣವನ್ನು ಸಣ್ಣಾಕ್ಷರದಲ್ಲಿ ಕೆಳಗೆ ಸೇರಿಸಿರುತ್ತೇವೆ. ಕೊನೆಯ ಪುಟದಲ್ಲಿ ಇದ್ದ ಒಂದು ಪದ್ಯವು ಗ್ರಂಥಕರ್ತನದಲ್ಲವೆಂದು ತಿಳಿದುಬಂದುದರಿಂದ ಅದನ್ನು ಸಣ್ಣಕ್ಷರದಲ್ಲಿ ಮುದ್ರಿಸಿರುತ್ತೇವೆ. ಗ್ರಂಥ ಮಧ್ಯದಲ್ಲಿ ಪ್ರಮಾದದಿಂದ ಬಿದ್ದಿರುವ ಅಕ್ಷರಸ್ಖಾಲಿತ್ಯವನ್ನು ಮುಂದೆ ಕೊಟ್ಟಿರುತ್ತೇವೆ.

ಈ ಗ್ರಂಥವು ಶೈವವಿಶಿಷ್ಟಾದ್ವೈತಿಗಳಾದ ವೀರಶೈವರಿಗೋಸ್ಕರಲೇ ರಚಿಸಲ್ಪಟ್ಟಿತಾದುದರಿಂದ ಅವರೆಲ್ಲರಿಗೂ ಅತ್ಯಾವಶ್ಯಕವಾದುದಾ

ಗಿದೆ. ಇದರಲ್ಲಿ ವೇದಪುರಾಣಾಗವೋಪನಿಷದಾದಿ ಪ್ರಮಾಣಗಳಿಂದ ಶಿವಾಧಿಕ್ಯವೂ, ವೀರಶೈವಸಿದ್ಧಾಂತಸ್ವರೂಪವೂ, ಅನ್ಯಮತಖಂಡನವೂ ನಿರೂಪಿಸಲ್ಪಟ್ಟಿವೆ. ಅನುವಾದಮಾಡಿರುವ ಪ್ರಮಾಣಗಳ ಪ್ರತಿಪದಾರ್ಥತಾತ್ಪರ್ಯಗಳು ಸಾಮಾನ್ಯರಿಗೆ ಕೂಡ ಅನಾಯಾಸವಾಗಿ ತಿಳಿಯುವಂತೆ ಸುಲಭವಾದ ಕನ್ನಡ ಮಾತಿನಿಂದಲೇ ರಚಿಸಲ್ಪಟ್ಟಿರುವುದರಿಂದ, ಮತಾವಲಂಬಿಗಳೆಲ್ಲರೂ ಅನುಮೋದಿಸುವರೆಂದು ನಂಬಿರುತ್ತೇವೆ.

ಸ್ಟಾರಾಫೀಸ
ಮೈಸೂರ್: 22/2/900.

ಪ್ರೊಪ್ರೈಟರ.

---

## —ಕವಿಯ ಚರಿತೆ.—

ಈ ಗ್ರಂಥಕರ್ತನ ಹೆಸರು ನೀಲಕಂಠಾರ್ಯದೇವನು. ಕುಮಾರಪದ್ಮರಸಕವಿಯಿಂದ ರಚಿಸಲ್ಪಟ್ಟ "ಪದ್ಮರಸಪುರಾಣ" ವೆಂಬ ಗ್ರಂಥದ ವಾದಪ್ರಕರಣದಲ್ಲಿಯೂ, ಪಾಲ್ಕುರಿಕೆ ಸೋಮನಾಥಕವಿಯಿಂದ ರಚಿಸಲ್ಪಟ್ಟ "ಬಸವರಾಜೀಯ (ಸೋಮನಾಥ ಭಾಷ್ಯ) ವೆಂಬ ಗ್ರಂಥದಲ್ಲಿಯೂ ಹೇಳಲ್ಪಟ್ಟಿರುವ ವಿಷಯವೇ ಇದರಲ್ಲಿ ನಿರೂಪಿಸಿರುವದರಿಂದ ಆ ಗ್ರಂಥಗಳೇ ಇದಕ್ಕೆ ಆಧಾರವಾಗಿರಬಹುದು. ಈ ಗ್ರಂಥದ ಶೈಲಿಯನ್ನು ನೋಡಿದರೆ ಸುಮಾರು ೩೫೦–೪೦೦ ವರ್ಷಗಳ ಹಿಂದೆ ಬರೆದಂತೆ ಊಹಿಸುವುದಕ್ಕೆ ಅವಕಾಶವಿದೆ. ಆದುದರಿಂದ ಈ ಕವಿಯು ಕ್ರಿಸ್ತಶಕೆ 1500 ಕ್ಕೆ ಈಚೆ ಇದ್ದನೆಂದು ತೋರುತ್ತದೆ. ಮದರಾಸ್ ಓರಿಯಂಟಲ್ ಲೈಬ್ರರಿ ಎಂಬ ಪ್ರಾಚೀನ ಪುಸ್ತಕಾಗಾರದಲ್ಲಿ ಈ ಗ್ರಂಥದ ಒಂದು ಪ್ರತಿಇದೆ. ಅದರಲ್ಲಿ ಈ ಗ್ರಂಥಕರ್ತನು ಚಿಕ್ಕಣ್ಣಬಸವೇಶ್ವರನು ಎಂದಿದೆ. ಹೀಗಿರುವುದರಿಂದ ಈತನು ಬ್ರಹ್ಮಸೂತ್ರಕ್ಕೆ ಶೈವ ಭಾಷ್ಯವನ್ನು ಬರೆದ ನೀಲಕಂಠಾರ್ಯನೆಂದು ಭ್ರಮಿಸುವುದಕ್ಕೆ ಅವಕಾಶವಿಲ್ಲ.

ಈತನು ಬಹಳ ದೊಡ್ಡ ಪಂಡಿತನೂ, ಶಾಸ್ತ್ರಜ್ಞನೂ ಆಗಿರುತ್ತಾನೆ. ಈತನು ತನಗೆ "ಪರಮತವೇಶ್ಯಾಭುಜಂಗ" ನೆಂಬ ಬಿರುದು ಉಂಟೆಂದು ಬರೆಯುತ್ತಾನೆ. ಈತನ ಯೋಗ್ಯತೆಯನ್ನು ಈ ಗ್ರಂಥವೇ ಸ್ಪಷ್ಟವಾಗಿ ತಿಳಿಸುವುದು.

---

## ಗ್ರಂಥವಿಚಾರ.

ಈ ಗ್ರಂಥಕ್ಕೆ "ಪರವಾದಿ ಗಜಾಂಕುಶ ತಾರಾವಳಿ" ಎಂದು ಹೆಸರು. "ಜೈನ, ಚಾರ್ವಾಕ, ಮಾಯಾವಾದಿ (ಅದ್ವೈತ,) ವೈಷ್ಣವರೆಂಬ ಗಜಕ್ಕೆ ಅಂಕುಶವಾಗಿ" ಅಂದರೆ ಅವರ ಮದವನ್ನು ತನ್ನ ವಿಚಾರವೆಂಬ ಅಂಕುಶದಿಂದ ತಿವಿದು ಹೋಗಲಾಡಿಸುತ್ತಿರುವುದರಿಂದ "ಪರವಾದಿ ಗಜಾಂಕುಶ" ವೆಂಬ ಹೆಸರನ್ನೂ, ಆಕಾಶವು ಇಪ್ಪತ್ತೇಳು ನಕ್ಷತ್ರಗಳಿಂದ ಪ್ರಕಾಶಿಸುವಂತೆ ಇಪ್ಪತ್ತೇಳು ಸೂತ್ರಗಳಿಂದ

ಶೈವವಿಶಿಷ್ಟಾದ್ವೈತ ಮತವು ಸ್ಥಾಪಿಸಲ್ಪಟ್ಟು ಮೆರೆಯುತ್ತಿರುವುದರಿಂದ "ತಾರಾವಳಿ" ಎಂಬ ಹೆಸರನ್ನೂ, ಈ ಎರಡು ಆಶಯುಗಳೂ ಈ ಗ್ರಂಥದಲ್ಲಿ ಅಡಕವಾಗಿರುವದ ರಿಂದ ಇದಕ್ಕೆ "ಪರವಾದಿ ಗಜಾಂಕುಶ ತಾರಾವಳಿ" ಎಂಬ ಹೆಸರನ್ನೂ ಕವಿಯು ಕೊಟ್ಟಿರುವಂತೆ ತೋರುತ್ತದೆ.

ಇದರಲ್ಲಿ ಇಪ್ಪತ್ತೇಳು ಸೂತ್ರಗಳಿರುವುವು. ಕವಿಯು ಕಂಠ ಪಾಠಕ್ಕೂ ಗಾನ ಕ್ಕೂ ಅನುಕೂಲವಾಗಿದ್ದರೆ, ವಿಷಯುಗಳು ಬುದ್ಧಿಗೆ ಚೆನ್ನಾಗಿ ಹತ್ತುವುದೆಂಬ ಅಭಿ ಪ್ರಾಯದಿಂದ, ಸೂತ್ರಗಳೆಲ್ಲವನ್ನು ಹಾಡಿನಂತೆ ಮಾಡಿರುತ್ತಾನೆ. ಪ್ರತಿ ಸೂತ್ರದ ಲ್ಲಿಯೂ ಚರ್ಚಿಸಿ ಸಿದ್ಧಾಂತವಾದ ವಿಷಯುದ ಅಂಶವನ್ನು ಕೊನೆಯಲ್ಲಿ ಕೊಟ್ಟಿ ರುವನು. ಸೂತ್ರದಲ್ಲಿ ಮಾಡಿರುವ ವಿಚಾರವು ವೇದಾಂತಕ್ಕೆ ಸಂಬಂಧಪಟ್ಟಿರು ವುದರಿಂದಲೂ, ಶ್ರುತಿ ಸ್ಮೃತಿ ಪುರಾಣ ಇತಿಹಾಸ ಆಗಮ ಮುಂತಾದವುಗಳ ಅನು ವಾದಗಳನ್ನು ಒಳಕೊಂಡಿರುವುದರಿಂದಲೂ ಸೂತ್ರಕ್ಕೆ ವ್ಯಾಖ್ಯಾನವೂ ಬೇಕಾಯಿತು. ಆದುದರಿಂದ ಕವಿಯು ತಾನೇ ವ್ಯಾಖ್ಯಾನವನ್ನು ಬರೆದಿರುತ್ತಾನೆ. ಮತ್ತು ಸೂ ತ್ರದಲ್ಲಿ ಸೂಚಿಸಿರುವ ಅನುವಾದಗಳನ್ನು ವ್ಯಾಖ್ಯಾನದಲ್ಲಿ ಪೂರ್ಣವಾಗಿ ಬರೆದಿರು ತ್ತಾನೆ. ಅವುಗಳಿಗೆ ಅರ್ಥವನ್ನು ಸಾಮಾನ್ಯಜನಗಳಿಗೆ ತಿಳಿಯುಪಡಿಸುವುದಕ್ಕೆ ಕನ್ನ ಡಭಾಷೆಯಲ್ಲಿ ಟೀಕೆ ಬರೆದಿರುತ್ತಾನೆ. ಅಲ್ಲದೆ ಕೆಲವು ಕಡೆ ಸೂತ್ರದಲ್ಲಿ ಇಲ್ಲದ ಶ್ರುತಿ ಯುನ್ನೂ ವ್ಯಾಖ್ಯಾನದಲ್ಲಿ ವಿಸ್ತಾರವಾಗಿ ಬರೆದಿರುತ್ತಾನೆ.

---

# ಶುದ್ಧಾಶುದ್ಧ ಪತ್ರಿಕಾ.

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೫ | ೨೦ | ಭಾವಾನಿ | ಭವಾನಿ |
| ೯ | ೯ | ರುದ್ರೇಂದ್ರಾದ್ರಾಸ್ತೇ | ರುದ್ರೇಂದ್ರಾಸ್ತೇ |
| ೧೯ | ೧ | ವಿಪ್ರೇಂದಾಃ | ವಿಪ್ರೇಂದ್ರಾಃ |
| ,, | ೩ | ದಿರರೆ | ದರರೆ |
| ,, | ೪ | ದರ್ಥವ | ದಥರ್ವ |
| ೨೩ | ೧೯ | ಮೋಕ್ಷೇಚೆ | ಮೋಕ್ಷೇಚ್ಛೆ |
| ೨೯ | ೧೦ | ಖಂಬ | ಎಂಬ |
| ೩೨ | ೮ | ಈ ಯಥರದಲ್ಲಿ | ಈ ಯರ್ಥದಲ್ಲಿ |
| ೩೩ | ೨೫ | ತ್ರಿಯಂಬಕೋಂ | ತ್ರಯಂಬಕೋ |
| ,, | ೨೬ | ಶಿರಶ್ಯಂಕುನಾ ಚಕರ್ಥ | ಶಿರಶ್ಚಂಚುನಾ ಚಕರ್ತ |
| ೪೪ | ೨೩ | ಆನಂದಾತ್ಮಿಕಗಳಾದ | ಆನಂತಾತ್ಮಿಕಳಾದ |
| ೫೬ | ೨ | ತಸ್ಯದಿ | ತಸ್ಯಾದಿ |
| ೬೫ | ೬ | ಬಿಂ್ರದು | ಬಿಂದು |
| ೭೨ | ೧೪ | ಪೇಟಿ | ಪೇಟಿ |
| ,, | ೧೮ | ಪಣೆಗಣೊಳ್ | ಪಣೆಗಣ್ಣೊಳ್ |
| ೮೫ | ೧೮ | ಶೇಶಾನಾದಾಯುಃ | ಶೇಷ್ಠಾನಾದಯುಃ |
| ೮೯ | ೧೩ | ಶಿವನೆಂಬುದಥ | ಶಿವನೆಂಬುದರ್ಥ |



# ಪೀಠಿಕೆ.

—:0:—

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ॥
ಸಂಹರ್ತಾ ಕಾಲರುದ್ರಾಖ್ಯಸ್ತಂ ನಮಾಮಿ ಪಿನಾಕಿನಂ ॥೧॥
ಯಸ್ಮಾದ್ಭಿಷಾ ದಹತ್ಯಗ್ನಿರುದೇತಿ ಚ ರವಿ ಶ್ಯಶೀ ॥
ವಾತೋ ವಾತಿ ತುಷೋಸಿ ತ್ವಂ ಮೃತ್ಯುರ್ಧಾವತಿ ಪಂಚಮಃ ॥೨॥

ಟೀಕು—(ಯಸ್ಯ—ಆವನಾನೊರ್ವ ಪರಮೇಶ್ವರನ, ಆಜ್ಞಯಾ—ನಿಜಾಜ್ಞೆಯಿಂದೆ, ವಿರಿಂಚಿಃ-ಬ್ರಹ್ಮನು, ಜಗತ್—ಸಮಸ್ತ ಜಗತ್ತುಗಳನ್ನು, ಸ್ರಷ್ಟಾ—ಸೃಷ್ಟಿಮಾಡುತ್ತಿಹನು, ಹರಿಃ—ಮಹಾವಿಷ್ಣುವು, ಪಾಲಕಃ—ರಕ್ಷಿಸುತ್ತಿಹನು, ಕಾಲರುದ್ರಾಖ್ಯಃ—ಕಾಲರುದ್ರನೆಂಬ ಹೆಸರನುಳ್ಳ ರುದ್ರನು, ಸಂಹರ್ತಾ—ಸಂಹಾರವಂ ಮಾಡುತ್ತಿಹನು, ತಂ—ಆ ಬ್ರಹ್ಮವಿಷ್ಣುರುದ್ರರಿಗೆ ಕರ್ತೃವಾದ "ಶಿವಮದ್ವೈತಂ ಚತುರ್ಥಂ ಮನ್ಯಂತೇ" ಎಂಬ ತಾಪನೀಯವಾಕ್ಯಪ್ರಸಿದ್ಧವಾಗಿ ತ್ರಿಮೂರ್ತಿಗಳತ್ತಣಿಂದೆ ಬೇರಾಗಿರ್ದಂತಹ, ಪಿನಾಕಿನಂ—ಪಿನಾಕವೆಂಬ ಆಯುಧಮಂ ಧರಿಸಿದಂತಹ, ನಾಲ್ಕನೆಯವನಾದಂತಹ ಪರಶಿವಮೂರ್ತಿಯನ್ನು, ನಮಾಮಿ—ನಮಸ್ಕರಿಸುತ್ತಿಹೆನು. ॥೧॥)

ಟೀ- (ಯಸ್ಮಾತ್—ಆವನಾನೊಬ್ಬ ಪರಶಿವಮೂರ್ತಿಯತ್ತಣಿಂದೆ,ಭಿಷಾ-ಭಯದೊಡನೆ ಕೂಡಿ, ಅಗ್ನಿಃ—ಯಜ್ಞೇಶ್ವರನು, ದಹತಿ—ಸುಡುತ್ತಿಹನು,ರವಿಶ್ಯಶೀ—ಸೂರ್ಯಚಂದ್ರರು, ಉದೇತಿ—ಉದಯಿಸುತ್ತಿಹರು, ವಾತಃ—ವಾಯುಪುರುಷನು, ವಾತಿ—ಸಂಚರಿಸುತ್ತಿಹನು, ಪಂಚಮಃ—ಐದ

ನೆಯುದಾದಂತಹ, ಮೃತ್ಯುಃ—ಕಾಲಮೃತ್ಯುವು, ಧಾವತಿ—ಸಚರಾಚರ ಪ್ರಾಣಿಗಳನ್ನು ಬಟಿವಿಡಿದು ಕೊಲ್ಲುತ್ತಿಹುದು, ಸಃ—ಅಂತಹ ಜಗದು ತ್ಪಾದನಸ್ಥಾಪನಸಂಹಾರತಿರೋಧಾನಾವಿರ್ಭಾವಂಗಳೆಂಬ ಪಂಚಕೃತ್ಯಂ ಗಳಿಗೆ ಕರ್ತೃವಾದ ಪರಬ್ರಹ್ಮವು, ತ್ವಂ—ನೀನೆ, ಅಸಿ—ಆಗುತ್ತಿದ್ದೆ. ॥೨॥)

ಇಂತೆಂಬ ಆದಿತ್ಯಪುರಾಣಯಜುರ್ವೇದವಾಕ್ಯಂಗಳನೆ ಅಧಿಕರಿಸಿ ಕೊಂಡು "ಏಕಮೇವಾದ್ವಿತೀಯಂ ಬ್ರಹ್ಮ", "ಏಕಏವ ರುದ್ರೋ ನ ದ್ವಿತೀಯಾಯ ತಸ್ಥೇ" ಎಂದು ಐಕ್ಯಾದರಣದ್ವೈತನಿಷೇಧಂಗಳಿಂದೆ ಅನಾದಿರುದ್ರನೊರ್ವನೆ ಪರಬ್ರಹ್ಮವೆಂದು ನಿರ್ಣೈಸಲ್ಪಟ್ಟ

"ಓಂ ಋತಗಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ ॥
ಊರ್ಧ್ವರೇತಂವಿರೂಪಾಕ್ಷಂ ವಿಶ್ವರೂಪಾಯ ವೈ ನಮೋನಮಃ"

ಎಂದು ವೇದಪುರುಷನು ನಾರಾಯಣಾದಿ ಸಮಸ್ತದೇವತೆಗಳಂ ಪೇಳ್ವಲ್ಲಿ ತದಂತರ್ಯಾಮಿಪರತ್ವದಿಂದೆ ಪರಮೇಶ್ವರನನ್ನೇ ಪೇಳ್ದಿ ನೆಂಬುದರ್ಕೆ ದೃಷ್ಟವಾಗಿ ತೋಳ್ತಿತ್ತು ಅಂತಹ ನಿಷ್ಕಲಪರಬ್ರಹ್ಮ ವನ್ನು ಉಪಾಸನಾನಿಮಿತ್ತವಾಗಿ ಸತ್ಯೋಕ್ತಿಯಿಂದೆ ಸ್ವರೂಪಭೇ ದವನ್ನು ನಿರವಿಸುತಿರ್ದಪಂ—

(ಋತಗಂ ಸತ್ಯಂ—ಯಥಾರ್ಥಂ, ಯಥಾರ್ಥಮು, ಪುರುಷಂ— "ಪುರುಷೋ ವೈ ರುದ್ರಃ" ಎಂದು ಸಮಸ್ತ ವೇದಪ್ರಸಿದ್ಧವಾಗಿ ಪುರು ಷನೊರ್ವನೇ ರುದ್ರನು; ಮಿಕ್ಕ ವಿಷ್ಣ್ವಾದಿ ಸಮಸ್ತ ದೇವತೆಗಳೆಲ್ಲಂ ಸ್ತ್ರೀಯರೆಂದು ನಿರ್ಣೈಸಲ್ಪಟ್ಟ, ಕೃಷ್ಣಪಿಂಗಳಂ—ಉಮಾರ್ಧವಿಗ್ರ ಹನಾಗಿ, ಅರ್ಧಭಾಗದ ನೀಲವರ್ಣ ಅರ್ಧಭಾಗದ ಪಿಂಗಳವರ್ಣವನುಳ್ಳ, ಊರ್ಧ್ವರೇತಂ—ಊರ್ಧ್ವರೇತಸ್ಸುಳ್ಳ, ವಿರೂಪಾಕ್ಷಂ—ಸೋಮಸೂರ್ಯಾ ಗ್ನಿಲೋಚನನಾದ, ವಿಶ್ವರೂಪಾಯ— "ಸರ್ವಂ ಖಲ್ವಿದಂ ಬ್ರಹ್ಮ"

ಎಂಬ ಶ್ರುತಿಪ್ರಸಿದ್ಧವಾಗಿ ಸಚರಾಚರವಿಶ್ವರೂಪನೂ ತಾನೆಲದ ಪರಬ್ರಹ್ಮಕ್ಕೊಕ್ಕನಸ್ಕರ, ನಮೋನಮಃ—ನಮಸ್ಕಾರವು ನಮಸ್ಕಾರವು. ವಿಷ್ಣು ಮೊದಲಾದ ದೇವತೆಗಳಂ ಪೇಳ್ವಲ್ಲಿ ಒಂದು ವೇಳೆ ನಮಸ್ಕಾರಂ ಪೇಳಿಪಟ್ಟಿತು, ತತ್ಪತಿಯಾದ ಮಹಾದೇವನಂ ಪೇಳ್ವಲ್ಲಿ ಎರಡು ವೇಳೆ ನಮಸ್ಕಾರಂ ಪೇಳಿಲ್ಪಟ್ಟಿತು.) ಈ ಪ್ರಕಾರದಿಂದೆ ಕೃಷ್ಣಪಿಂಗಳ ರೂಪ, ಊರ್ಧ್ವರೇತಸ್ಸು, ವಿರೂಪಾಕ್ಷತ್ವಂ, ಉಂಟಾದವನೇ ಪರಬ್ರಹ್ಮವೆಂದು ವೇದಪುರುಷನು ಸತ್ಯೋಕ್ತಿಯಿಂದೆ ನಿರ್ಣಯಿಸಿದ ಪರಮ ಕಾರಣರುದ್ರನೇ ಪರಬ್ರಹ್ಮವೆಂಬುದನುಗೀಕರಿಸಿ; ಮತ್ತಂ

"ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇಸರ್ವಾಣಿಚೇಂದ್ರಿಯಾಣಿ ಸಹಭೂತೈರ್ನಕಾರಣಂ ಕಾರಣಂತು ಧ್ಯೇಯಃ ಸರ್ವೈಶ್ವರ್ಯಸಂಪನ್ನಸ್ಸರ್ವೇಶ್ವರಶ್ಶಂಭುರಾಕಾಶಮಧ್ಯೇ ಧ್ರುವಂ" ಎಂಬ ಅಥರ್ವಶಿಖಾವಾಕ್ಯದಿಂದೆ, (ಸರ್ವಾಣಿಚೇಂದ್ರಿಯಾಣಿಸಹ—ಸಮಸ್ತಇಂದ್ರಿಯಂಗಳು ಸಹವಾಗಿ, ಭೂತೈಃ—ಪೃಥಿವ್ಯಪ್ತೇಜೋವಾಯ್ವಾಕಾಶಾದಿಮಹಾಭೂತಂಗಳೊಡನೆ, ಬ್ರಹ್ಮವಿಷ್ಣುರುದ್ರೇಂದ್ರಾಃ—ಬ್ರಹ್ಮ ವಿಷ್ಣುರುದ್ರದೇವೇಂದ್ರರೇ ಮೊದಲಾದ ತೇ—ಅವರುಗಳು, ಸಂಪ್ರಸೂಯಂತೇ—ಪಡೆಯಲ್ಪಡುತ್ತಿಹರು, ನಕಾರಣಂ—ತನ್ನ ಜನನಕ್ಕೆ ಮತ್ತೊರ್ವನಿಂದೆ ಕಾರಣವಿಲ್ಲದಿರ್ದಂತಾತನು, ಕಾರಣಂ—ಸಮಸ್ತ ವಿಷ್ಣು ಬ್ರಹ್ಮೇಂದ್ರಾದಿದೇವತೆಗಳ ಜನನಕ್ಕೆ ತಾನೇ ಕಾರಣನು, ಧ್ಯೇಯಃ—ಸರ್ವರಿಂದಲೂ ಧ್ಯಾನಕ್ಕೆ ಯೋಗ್ಯನಾಗಿರ್ದಂತಾತನು, ಸರ್ವೈಶ್ವರ್ಯಸಂಪನ್ನಃ—ಷಡ್ಗುಣೈಶ್ವರ್ಯಸಂಪನ್ನನಾದವನು, ಸರ್ವೇಶ್ವರಃ—ಸಮಸ್ತಚರಾಚರಂಗಳಿಗೂ ಕಾರಣಕರ್ತೃವಾದವನು, ಶಂಭುಃ—ಸುಖವ ಹುಟ್ಟಿಸುವಾತನು, ಆಕಾಶಮಧ್ಯೇ ಧ್ರುವಂ—ಚಿದಾಕಾಶಮಧ್ಯದಲ್ಲಿ ನಿತ್ಯನಾದಂತಹ)ನೆಂದು ಪೇಳುತ್ತುಂ; ಮತ್ತಂ

" ಶಿವಏಕೋಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಾಜ್ಯಂ " ಎಂದು, (ಶಿವಂಕರಃ–ಸಮಸ್ತ ಜೀವರಿಗೂ ಮಾಂಗಲ್ಯಕರನಾದಂತಹ, ಶಿವಏಕಃ–ಶಿವನೊರ್ವನೇ, ಧ್ಯೇಯಃ–ಧ್ಯಾನಕ್ಕೆ ಯೋಗ್ಯನು, ಅನ್ಯತ್–ಮತ್ತೆ ಕೆಲವಾದಂತಹ, ಸರ್ವಂ–ಸಮಸ್ತ ವಿಷ್ಣುಬ್ರಹ್ಮಾದಿದೇವತೆಗಳೇ ಪರಬ್ರಹ್ಮವೆಂದು ಪೇಳಿದಂತಹ ವಾಕ್ಯಂಗಳು ಪರಿತ್ಯಾಜ್ಯಂ–ಬಿಡುವುದರ್ಕೆ ಯೋಗ್ಯವಾದುವುಗಳೆಂದು) ನಿರ್ಧಾರಣಾರ್ಥವಾಗಿ ಪೇಳಿ ಅಥರ್ವಶಿಖೆ ಪರಿಸಮಾಪ್ತಿಯಾಯಿತಾಗಿ ಬ್ರಹ್ಮವಿಷ್ಣುರುದ್ರೇಂದ್ರಾದಿ ದೇವತೆಗಳನ್ನು ಮಹಾಭೂತಂಗಳೊಡನೆ ಸಮಾನವಾಗಿ ಪೇಳ್ದು, ಸರ್ವಕಾರಣನು ಪರಾತ್ಪರವಾದ ಶಂಭುವೆಂದೇ ನಿರವಿಸಿ ಗುಣಮೂರ್ತಿಗಳಾದ ಬ್ರಹ್ಮವಿಷ್ಣುರುದ್ರರಿಗೆ ಕಾರಣನಾದಾತನು ಶಂಭುವೆಂದುದಱಿಂದೆ ಸತ್ವರಜಸ್ತಮೋಗುಣಗಳಂ ಮೀಱಿದವನೆಂದು ತೋಱಲ್ಪಟ್ಟಿತಾಗಿ "ಶಿವಏಕೋಧ್ಯೇಯಃ" ಎಂಬುದಱಿಂದೆ ಅದ್ವಿತೀಯಪರಬ್ರಹ್ಮವು ಶಿವನೊರ್ವನೆ ಎಂದು ತಿಳಿಯಲ್ಪಟ್ಟಿತಾಗಿ "ಸರ್ವಮನ್ಯತ್ಪರಿತ್ಯಾಜ್ಯಂ" ಎಂಬುದಱಿಂ ಸಮಸ್ತ ವಿಷ್ಣುಬ್ರಹ್ಮಾದಿ ದೇವತೆಗಳಂ ಬಿಡಲ್ತಕ್ಕುದೆಂದು ನಿಶ್ಚಯಿಸಲ್ಪಟ್ಟಿತಾಗಿ; ಮತ್ತಂ ಋಗ್ವೇದದ ಮೊದಲಲ್ಲಿಯು

" ಅಗ್ನಿಮೀಡೇ ಪುರೋಹಿತಂ " ಎಂದು, (ಪುರೋಹಿತಂ–ಪೃಥಿವ್ಯಪ್ತೇಜೋವಾಯ್ವಾಕಾಶಾದಿ ಮಹಾಭೂತಂಗಳಿಗಂ ಮುನ್ನಮೆ ತನ್ನಿಂ ತಾನೇ ಪ್ರಕಾಶಿಸುತಿರ್ದುದಾದ, (ಅಗ್ನಿಂ–"ರುದ್ರೋವಾಏಷಯದಗ್ನಿಃ" ಎಂದು ವೇದಪ್ರಸಿದ್ಧವಾಗಿ ರುದ್ರನೇ ಮಹದಗ್ನಿರೂಪನೆಂದು ಪೇಳಲ್ಪಟ್ಟಿತಾಗಿ ಅಂತಹ ಮಹದಗ್ನಿಯೊಡ ರುದ್ರನನ್ನು, ಈಡೇ–ಸ್ತೋತ್ರವಂ ಮಾಡಿಹೆನು) ಎಂದು ನಾಲ್ಕನೆಯ ವೇದವು ಮೊದಲಲ್ಲಿಯೆ ರುದ್ರನನ್ನು ಪೇಳಿ, ಕಡೆಯಲ್ಲಿ " ಶಿವಏಕೋಧ್ಯೇಯಃ, ಶಿವಂ ಕರಃ, ಸರ್ವಮನ್ಯತ್ಪರಿತ್ಯಾಜ್ಯಂ "

ಎಂದು ಶಿವನೊರ್ವನೆ ಧ್ಯಾನಕ್ಕೆ ಕಾರಣನು ವಿಷ್ಣು ಮೊದ ಲಾದ ಸಮಸ್ತ ದೇವತೆಗಳನ್ನು ಬಿಡಲ್ತಕ್ಕುದೆಂದು ಪರಿಸಮಾಪ್ತಿಯನ್ನೈದಿ ತ್ತಾಗಿ; ನಾಲ್ಕುವೇದಂಗಳ ಆದಿಮಧ್ಯಾಂತಂಗಳಲ್ಲಿಯುಂ ಶಿವನನ್ನೇ ಪೇಳು ತ್ತಾಗಿ; ಕೆಲವು ವಿಷ್ಣುಬ್ರಹ್ಮಾದಿದೇವತೆಗಳಂ ಪೇಳ್ವ ವಾಕ್ಯಂಗಳು ತದಂತರ್ಯಾಮಿಪರತ್ವದಿಂದೆ ಶಿವನೇ ಪೇಳಲ್ಪಟ್ಟನೆಂದು ನಿಶ್ಚಯಿ ಸಲ್ಪಟ್ಟುದಾಗಿ;

"ಯೋ ರುದ್ರೋ ಅಗ್ನೌ ಯೋ ಅಪ್ಸು ಯಓಷಧೀಷು ಯೋ ರುದ್ರೋ ವಿಶ್ವಾಭುವನಾವಿವೇಶ ತಸ್ಮೈರುದ್ರಾಯ ನಮೋಸ್ತು" ಎಂದು ವೇದಪ್ರಸಿದ್ಧವಾಗಿ, (ಯಃರುದ್ರಃ—ಆವನಾನೊರ್ವ ರುದ್ರನು, ಅಗ್ನೌ—ಅಗ್ನಿಯಲ್ಲಿ ಅಂತರ್ಯಾಮಿಯಾಗಿದ್ದು ಪೇಳಿಸಿಕೊಳ್ಳಲ್ಪಡುತ್ತಿ ಹನು, ಯಃ—ಆವನಾನೊರ್ವ ರುದ್ರನು, ಅಪ್ಸು—ಉದಕದಲ್ಲಿ ಅಂತ ರ್ಯಾಮಿಯಾಗಿದ್ದು ಪೇಳಿಸಿಕೊಳ್ಳಲ್ಪಡುತ್ತಿಹನು, ಯಃ—ಆವನಾನೊ ರ್ವರುದ್ರನು, ಓಷಧೀಷು—ಸಮಸ್ತ ತೃಣಲತೆ ಮೊದಲಾದ ಓಷಧಿಗಳಲ್ಲಿ ಅಂತರ್ಯಾಮಿಯಾಗಿದ್ದು ಹೇಳಿಸಿಕೊಳ್ಳಲ್ಪಡುತ್ತಿಹನು, ಯಃ—ಆವನಾ ನೊರ್ವ, ರುದ್ರಃ—ರುದ್ರನು, ವಿಶ್ವಾಭುವನಾವಿವೇಶ—ಸಮಸ್ತ ವಿಷ್ಣು ಬ್ರಹ್ಮ ಮೊದಲಾದ ದೇವತೆಗಳ ಹೃದಯದಲ್ಲಿ ಅಂತರ್ಯಾಮಿಯಾಗಿದ್ದು ಪೇಳಿಸಿಕೊಳ್ಳಲ್ಪಡುತ್ತಿಹನು, ತಸ್ಮೈರುದ್ರಾಯ—ಅಂತಹ ರುದ್ರನಿ ಗೋಸ್ಕರ, ನಮಃ—ನಮಸ್ಕಾರವು, ಅಸ್ತು—ಆಗಲಿ.)

ಇಂತೆಂದುದಾಗಿ ಸಮಸ್ತ ವಿಷ್ಣುಬ್ರಹ್ಮಾದಿಗಳಂ ಪೇಳ್ವ ವಾಕ್ಯಂ ಗಳೆಲ್ಲವು ಮಹಾದೇವನಂ ಪೇಳುತ್ತಿಹುವೆಂದಱಿಯಲ್ಪಟ್ಟವಾಗಿ

"ನಮೋವಃಕಿರಿಕೇಭ್ಯೋ ದೇವಾನಾಂ ಹೃದಯೇಭ್ಯೋ" ಎಂದು ಯಜುರ್ವೇದದ ಶ್ರೀರುದ್ರಸೂಕ್ತದಲ್ಲಿ ಒಂಭತ್ತನೆಯ ಅನುವಾಕದಲ್ಲಿ ಪೇಳಲ್ಪಟ್ಟತ್ತಾಗಿ ಅನೇಕರುದ್ರರು ಸಮಸ್ತದೇವತೆಗಳ ಹೃದಯದಲ್ಲಿ

ಅಂತರ್ಯಾಮಿಗಳಾಗಿ ಆ ಆ ದೇವತೆಗಳಿಗೆ ಮಾಡಿದ ಪೂಜಾಸಮಸ್ತಾರಾಧಿಗಳಂ ಪರಮೇಶ್ವರಂಗೆ ಸಮರ್ಪಿಸುತ್ತಿಹರು, ಎಂದು ಪೇಳಲ್ಪಟ್ಟತಾಗಿ ಸಮಸ್ತ ದೇವತಾಂತರ್ಯಾಮಿ ಈಶ್ವರನೆಂಬ ನಿಶ್ಚಿತಾರ್ಥವನವಲಂಬಿಸಿ;

ಶ್ರೀನಂದಿನಾಥ ಭೃಂಗಿನಾಥ ವೀರಭದ್ರದೇವರು ಮುಖ್ಯವಾದ ಮಹಾಪ್ರಮಥಗಣಂಗಳದಿವ್ಯಶ್ರೀಪಾದಪದ್ಮಂಗಳಿಗೆ ನಮೋನಮೋ ಎಂದು ಜೈನ, ಛಾರ್ವಾಕ, ಮಾಯಾವಾದಿ, ವೈಷ್ಣವರೆಂಬ ಮದಗಜಕ್ಕೆ ಅಂಕುಶಮಾಗಿ "ಪರವಾದಿಗಜಾಂಕುಶತಾರಾವಳಿ" ಯಂ ಭಕ್ತಮಾಹೇಶ್ವರಪ್ರೀತ್ಯರ್ಥಮಾಗಿ ಸರ್ವಗೋಚರಮಪ್ಪಂತೆ ಸೂಕ್ಷ್ಮಸಂಗ್ರಹಮಾಗಿ ಸಕಲ ವೇದಶಾಸ್ತ್ರೋಪನಿಷದರ್ಥಮಂ ಗರ್ಭೀಕರಿಸಿ ಪರಮತವೇಶ್ಯಾಭುಜಂಗನೆಂಬ ಬಿರುದಾಂಕನಾದ ಗುರುಚರಪಾದಸೇವಕನಾದ ಶ್ರೀನೀಲಕಂಠಾರ್ಯದೇವನಿಂ ವಿರಚಿಸಲ್ಪಟ್ಟತ್ತು. ಅದೆಂತೆಂದೊಡೆ:—

---

ಶ್ರೀ.

ಶ್ರೀ ನೀಲಕಂಠಾರ್ಯದೇವನಿಂ

ವಿರಚಿಸಲ್ಪಟ್ಟ

# ಪರವಾದಿ ಗಜಾಂಕುಶ ತಾರಾವಳಿ.

ಕಂ ॥ ಶ್ರೀಗಿರಿಜಾಕುಚಕುಂಕುಮ ।
ರಾಗಾಂಕಿತವಕ್ಷನಕ್ಷಯಂ ಸರ್ವೇಶಂ ॥
ಯೋಗಿಜನಹೃನ್ನಿವಾಸಂ ।
ಭೋಗೀಂದ್ರಾಭರಣನೊಲ್ದು ಸಲಹಲಿ ಜಗಮಂ ॥

ರಾಗ— ಕನ್ನಡಕಾಂಬೋದಿ.

ಪಲ್ಲವಿ ॥ ಕೇಳೆಲೊ ವಾದಿ ಶಂಕರಗೆ ಸಮಾನನೆಂ ।
ದೂಱುವುದನುಚಿತ ನಿಮ್ಮ ವಿಷ್ಣುವನು ॥

ಪದ ॥ ವರಪೃಥ್ವಿಯಪ್ಪು ತೇಜೋವಾಯುವಾಕಾಶ ।
ಸರಸಿಜಸಖ ಚಂದ್ರ ದೇವೇಂದ್ರ ಕಮಲಜ ।
ಹರಿಸುರೋರಗ ಮುಂತಾದ ಸಚರಾ ।
ಚರದ ಸ್ಥಿತಿಗಳಿಲ್ಲದತ್ತತ್ತ ಮುನ್ನಮೆ ॥
ಹರನಪ್ರಮಾಣನಾದ್ಯಂತರಹಿತನಗೋ ।
ಚರನನುಪಮನಿಷ್ಕಲಂಕನಿರಾಕಾರ ।
ಸ್ಥಿರಚಿದಾನಂದ ತೇಜೋಮೂರ್ತಿ ನಿರ್ಗುಣ ।
ನಿರಘ ನಿರಾಧಾರ ನಿರ್ದ್ವಂದ್ವ ನಿಶ್ಚಲ ।
ನಿರುಪಪ್ಲವ ನಿರಾವರಣನೆನಿಸುವ ಶಂ ।
ಕರನು ಸ್ವಾತ್ಮಾನುಭವಾಮೃತಮಯನಾಗಿ ।

ಪರವನಱಿಯದೆ ಪರಾತ್ಪರನಾಗಿ ಭಾ ।
ಸುರ ಚಿತ್ಪ್ರಭೆಯೆ ರೂಪುವೆತ್ತು ರಾಜಿಸುತಿರ್ದು ।
ಭರದೆ ಲೀಲಾವಿನೋದವ ನಟಿಯಿಸಲೋ ।
ಸ್ಕರವಾಗಿಯೊಂದ ನೆನೆದನು ತನ್ನೊಳಗುಳ್ಳ ।
ಪರತರಚಿತ್ತವನು ಶಕ್ತಿರೂಪನು ಮಾಡಿ ।
ಶರಿರವಾಮಭಾಗದೊಳಿಂಬುಗೊಡುತೆಯೀ ।
ಶ್ವರನು ರುದ್ರಾಭಿಧಾನವನಾಂತನಾ ಶಕ್ತಿ ।
ಯೆರಡು ಪ್ರಕಾರವಾಗಿಪ್ಪಳದೆಂತೆನೆ ।
ಧರಗೆ ಮಾಯಾವಿಲಾಸವ ಬೀಜಲೋಸ್ಕರ ।
ಪುರುಷಾಹ್ವಯದ ನಾರಾಯಣನಾದಳಾ ।
ಪುರುಷನೇ ಜಲಮಯವಾಗಿ ವ್ಯಾಪಿಸಿದನಾ ।
ಶರದೊಳಿಂದ್ರಿಯವ ಬಿಡಲು ಶಿವನದು ಚಾವೀ ।
ಕರರೂಪುವೆತ್ತನಂತಾಂಡಂಗಳೊಗೆದವಾ ।
ಪರಿ "ಸರ್ವಂ ವಿಷ್ಣುಮಯಂ ಜಗತ್ತೆ"ಂದೆಂಬ ।
ಉರುವಾಕ್ಯದರ್ಥವನು ಕಾಣದಲೆ ನೀನು ।
ಅರವಿಂದನಾಭನನು ದೈವವೆನ್ನುತ್ತೆ ।
ಪಿರಿದಾಗಿ ನುಡಿದುದನು ನಂಬಿದುದಕೆ ನಾನೀಗ ।
ಳಱಿಪುವೆನು ಶ್ರುತಿಗಳನು ಲಾಲಿಪುದು ಶಂ ।
ಕರಿಯು ತಮೋಗುಣದಂಶ ತಾನವನು ॥೧॥

ಇಂತು ನಿರುಪಾಧಿಕ ನಿಷ್ಕಲಪರಬ್ರಹ್ಮವು ಸಚರಾಚರಲೋಕಾದಿ ಲೋಕಂಗಳೇನುಮಂ ಮುನ್ನಿಲ್ಲದತ್ತತ್ತಲಿಂ ಮುನ್ನವೆ ತಾನೇ ತಾನಾಗಿ ಸ್ವಯಂಜ್ಯೋತಿಃಪ್ರಕಾಶವಾಗಿ ತೋಱುತ್ತಿರ್ದು "ತತ್ಪರಂ ಬ್ರಹ್ಮ ವೈ ವಿಭಾತಿ ನ ತತ್ರದೇವಾನಋಷಯೋ ನಪಿತರೋ ನೇಷತೇ ಪ್ರತಿಬುಧ್ಯ ಸ್ವ ಸರ್ವಂ ಬುಧ್ಯತಿ ಸ ಶಿವ ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವಭೂತಾಂತರಾತ್ಮಾ" ಇಂತೆಂಬ ಬ್ರಹ್ಮೋಪನಿಷದರ್ಥವನ್ನು ಪ್ರಕಾಶಿಸುತ್ತೆ,(ತತ್ಪರಂಬ್ರಹ್ಮ-ಆಪರಬ್ರಹ್ಮವು, ವಿಭಾತಿ—ಒಪ್ಪುತ್ತಿರ್ಪುದು, ತತ್ರ—ಆ ಕಾಲದಲ್ಲಿ, ನ ದೇವಾಃ—ದೇವತೆಗಳೂ ಇಲ್ಲ, ಋಷಯಃ—ಸನಕಸನಂದಾದಿ ಮಹಾಋಷಿಗಳೂ, ನ—ಇಲ್ಲ, ಪಿತರಃ—ಪಿತೃದೇವತೆಗಳೂ ನ—ಇಲ್ಲ, ಮತ್ತೊಂದಱ ಇಚ್ಛೆಯಿಲ್ಲದೆ ಸರ್ವವನ್ನು ತಾನೇ ಅಱಿವು

ತಿರ್ದಾತನಾಗಿ, ಸ ಶಿವಃ—ಆ ಮಹಾದೇವನೇ, ಏಕೋದೇವಃ—ತನ್ನಿಂದನ್ಯವಿಲ್ಲದೆ ತಾನೊರ್ವನೇ ದೇವನಾಗಿರುತ್ತಿರ್ದನು. ಆ ದೇವನೆಂತಾತನೆಂದೊಡೆ, ಸರ್ವಭೂತೇಷು ಗೂಢಃ—ಮುಂದೆ ತನ್ನಿಂದ ಉತ್ಪನ್ನವಾದ ಸಮಸ್ತಪ್ರಾಣಿಗಳಲ್ಲಿ ಗುಪ್ತವಾಗಿ ಇರುವಂತಾತನು, ಸರ್ವಭೂತಾಂತರಾತ್ಮಾ—ಸಮಸ್ತಪ್ರಾಣಿಗಳಲ್ಲಿಯೂ ಅಂತರಾತ್ಮನಾಗಿರುವಾತನು.) ಮತ್ತಂ ಜಾಬಾಲಶಾಖೆಯಲ್ಲಿ:—

"ಪ್ರತ್ಯಂಜನಸ್ತಿಷ್ಠತಿ ಸ ಯುಗಸ್ಯಾಂತಕಾಲೇ ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ ನ ಬ್ರಹ್ಮಾ ನ ವಿಷ್ಣುಃ" ಎಂದುದಾಗಿ (ಯುಗಸ್ಯಾಂತಕಾಲೇ—ಮಹಾಪ್ರಳಯದಂತ್ಯಕಾಲದಲ್ಲಿ, ಪ್ರತ್ಯಂಜನಃ—ಪ್ರಕಾಶಿಸುತ್ತಿರ್ದಾತನಾಗಿ, ಏಕಏವ—ತಾನೊರ್ವನೇ ಆದಂಥ, ರುದ್ರಃ—ಅನಾದಿರುದ್ರನು, ನ ದ್ವಿತೀಯಾಯ—ಎರಡಿಲ್ಲದಂತಾದುದಕೋಸ್ಕರ, ತಸ್ಥೇ—ಇರುತ್ತಿರ್ದನು. ತದಾ—ಆಕಾಲದಲ್ಲಿ, ಬ್ರಹ್ಮಾ—ಬ್ರಹ್ಮನು, ನ—ಇಲ್ಲ, ವಿಷ್ಣುಃ—ವಿಷ್ಣುವು, ನ—ಇಲ್ಲ.)

ಈಯರ್ಥದಲ್ಲಿ—ಸ್ಕಾಂದೇ ಕಾಳಿಕಾಖಂಡೇಅಸ್ತಿಭೂಷಣಾಧ್ಯಾಯೇ:—

"ತದಾ ನಾಹೋ ನ ರಾತ್ರಿಶ್ಚ ನ ವಿಷ್ಣುರ್ನ ಪ್ರಜಾಪತಿಃ ॥ ನಾಕಾಶಾದೀನಿ ಭೂತಾನಿ ಕಿಂ ಪುನರ್ಭೌತಿಕಂ ಜಗತ್ ॥" (ತದಾ—ಆಮಹಾಪ್ರಳಯಕಾಲದ ಅಂತ್ಯದಲ್ಲಿ, ಅಹಃ—ಹಗಲೂ, ನ—ಇಲ್ಲ; ರಾತ್ರಿಶ್ಚ—ರಾತ್ರಿಯೂ, ನ—ಇಲ್ಲ; ವಿಷ್ಣುಃ—ನಾರಾಯಣನೂ, ನ—ಇಲ್ಲ; ಪ್ರಜಾಪತಿಃ—ಬ್ರಹ್ಮನೂ, ನ—ಇಲ್ಲ; ಆಕಾಶಾದೀನಿ—ಆಕಾಶವೇ ಮೊದಲಾದ, ಭೂತಾನಿ—ಪಂಚಮಹಾಭೂತಂಗಳು, ನ—ಇಲ್ಲ. ಕಿಂ—ಪುನಃ ಮತ್ತೇನು ಅಯ್ಯಾ ಎಂದೊಡೆ, ಜಗತ್—ಸಮಸ್ತ ಜಗತ್ತೂ, ಭೌತಿಕಂ—ಹರನ ನೇತ್ರಾಗ್ನಿಯಿಂದೆ ದಗ್ಧವಾಗಿ ಭೂತಿಸಂಬಂಧವನ್ನೈದಿತ್ತು. ತಾನೇ ಪ್ರಕಾಶಿಸುತ್ತಿರ್ದನೆಂದರ್ಥಂ.)

ಅಂತಪ್ಪ ನಿಷ್ಕಲಪರಬ್ರಹ್ಮವು ತನ್ನ ಲೀಲಾವಿನೋದನಿಮಿತ್ತವಾಗಿ ತನ್ನ ಚಿತ್ಪ್ರಭೆಯನ್ನೇ ಆದಿಶಕ್ತಿಯಂ ಮಾಡಿ ತನ್ನ ವಾಮಭಾಗದೊಳಿಂಬುಗೊಟ್ಟಂ. ಈ ಯರ್ಥದಲ್ಲಿ—ಶ್ರುತಿಯು:—

ಶ್ವೇತಾಶ್ವತರೋಪನಿಷದಿ ಷಷ್ಠಾಧ್ಯಾಯೇ— "ಯದಾ ತಮಸ್ತಂ ನ ದಿವಾ ನ ರಾತ್ರಿರ್ನಸನ್ನ ಚಾಸನ್ ಶಿವ ಏವ ಕೇವಲಃ ॥ ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಾಜ್ಞಾಚ ತಸ್ಮಾತ್ ಪ್ರಸೃತಾ ಪುರಾಣೀ ॥" (ಯದಾ— ಆವ ಕಾಲದಲ್ಲಿ, ತಮಸ್ತಂ—ಕೇವಲ ತಮೋಮಯನಾಗಿ, ನ ದಿವಾ—ಹಗಲೂ ಇಲ್ಲದೆ, ನ ರಾತ್ರಿಃ—ರಾತ್ರಿಯೂ ಇಲ್ಲದೆ, ನಸನ್ನ ಚಾಸನ್—ವ್ಯಕ್ತಾವ್ಯಕ್ತೋಭಯಪ್ರಪಂಚಂಗಳುಂ ಇಲ್ಲದೆ ಇರ್ದುದು, ತದಾ—ಆಕಾಲದಲ್ಲಿ, ಕೇವಲಃ—ಬಚ್ಚಬಱಿಯ, ಶಿವಏವ—ಜ್ಯೋತಿರ್ಮಯನಾದ ಮಂಗಳಸ್ವರೂಪನಾದ ಶಿವನೊರ್ವನೇ ಪ್ರಕಾಶಿಸುತ್ತಿರ್ದನು. ಏವ ಎಂಬ ನಿರ್ಧಾರಣಾರ್ಥದಿಂದೆ ಶಿವನೊರ್ವನೆಯಲ್ಲದೆ ವಿಷ್ಣು ಮೊದಲಾದವರೆಲ್ಲರುಂ ನಷ್ಟವನೆಯ್ದಿದರೆಂಬುದರ್ಥ. ತತ್—ಅಂತಹ ನಿಷ್ಕಲಪರಬ್ರಹ್ಮವು, ಅಕ್ಷರಂ—ಕೇಡಿಲ್ಲದಂಥಾದ್ದು, ತತ್ಸವಿತುರ್ವರೇಣ್ಯಂ— "ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋಯೋ ನಃ ಪ್ರಚೋದಯಾತ್" ಎಂಬ ಗಾಯತ್ರೀಮಂತ್ರದಿಂದೆ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟುದಾಗಿ, ತತ್—ಆ ಬ್ರಹ್ಮವು, ಸವಿತುಃ—ಸೂರ್ಯನೆಂಬ ದೇವತೆಗೆ ಅಂತರ್ಯಾಮಿಯಾಗಿ, ವರೇಣ್ಯಂ—ಶ್ರೇಷ್ಠಮಾದುದು, ಚಿತ್ಸೂರ್ಯನಾದರೂ ಆಗಲಿ, ತಸ್ಮಾತ್—ಅಂತಪ್ಪ ಪರಬ್ರಹ್ಮನ ದೆಸೆಯಿಂದೆ, ಪುರಾಣೀ—ಪೂರ್ವಿಕಳಾದಂಥ, ಪ್ರಾಜ್ಞಾ—ಸಮಸ್ತ ಬುದ್ಧಿಪ್ರೇರಕಳಾದಂಥ, ಚಿಚ್ಛಕ್ತಿಃ—ಚಿಚ್ಛಕ್ತಿಯು, ಪ್ರಸೃತಾ—ಹುಟ್ಟಿದಳು.)

ಅಂತಪ್ಪ ಚಿಚ್ಛಕ್ತಿಯನೆ ವಾಮಭಾಗದೊಳಿಂಬುಗೊಟ್ಟು "ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ । ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈನಮೋನಮಃ" ಎಂಬ ಶ್ರುತ್ಯರ್ಥವನ್ನು ಪ್ರಕಾಶಿಸುತ್ತುಂ ಕೃಷ್ಣಪಿಂಗಳರೂಪ, ಊರ್ಧ್ವರೇತಸ್ಸು, ತ್ರಿಲೋಚನತ್ವಮೆಂಬ ಸಾಕಾರಪರಬ್ರಹ್ಮರೂಪುವೆತ್ತು ರುದ್ರಾಭಿಧಾನಮನಾಂತು ರಾರಾಜಿಸುತ್ತಿರಲು ಆ ಚಿಚ್ಛಕ್ತಿಯೇ ಎರಡು ಪ್ರಕಾರಮಾದಳು. ಅದೆಂತೆಂದೊಡೆ:—ಲೋಕದ ಮಾಯಾವಿಲಾಸದ ನಟನೆಗೋಸ್ಕರ ತಮೋಗುಣಮನಂಗೀಕರಿಸಿ ತಮೋಗುಣಕ್ಕನುಗುಣವಾದ ನೈಲ್ಯರೂಪಂದಾಳ್ದು ಕೃಷ್ಣನೆಂಬಭಿಧಾನಮನಾಂತು ಜಗತ್ಪಾಲನಾರ್ಥಮಾಗಿ ಪುರುಷರೂಪಂ

ಡಳೆದುದರ್ಕೆ ಪುರಾಣಸಮ್ಮತಿ. ಪದ್ಮಪುರಾಣೇ-ವೇದಸಾರಶಿವಸಹಸ್ರ ನಾಮಪೀಠಿಕಾಯಾಂ ಕೃಷ್ಣವಾಕ್ಯಂ:—

"ವಾಮಾಂಗಸಂಭವಾ ಶಕ್ತಿಃ ಸಾಹಂ ವಿಷ್ಣುರಿತಿಸ್ಮೃತಃ ॥" (ಶಕ್ತಿಃ—ಆದಿಶಕ್ತಿಯು, ವಾಮಾಂಗಸಂಭವಾ—ಮಹಾದೇವನ ವಾಮ ಭಾಗದಲ್ಲಿ ಸಂಭವಿಸಿದಳು, ಸಾ—ಆ ಶಕ್ತಿಯು, ಅಹಂ—ನಾನು, ವಿಷ್ಣು ರಿತಿ—ವಿಷ್ಣುವೆಂದು, ಸ್ಮೃತಃ—ನೆನೆಯಲ್ಪಟ್ಟೆನು.) ಮತ್ತಂ ಪುರಾಣೇ:—

"ಯಾ ಶಿವಾ ಸಾ ಹರಿಃ ಪ್ರೋಕ್ತಾ ಯೋ ಹರಿ ಸ್ಸ ಶಿವಾಸ್ಮೃತಃ॥" (ಯಾ—ಆವಳಾಳೊರ್ಬಳ್, ಶಿವಾ—ಪಾರ್ವತಿಯು, ಸಾ—ಆಕೆಯು, ಹರಿಃ—ವಿಷ್ಣುವೆಂದು, ಪ್ರೋಕ್ತಾ—ಹೇಳಿಲ್ಪಟ್ಟಳು, ಯಃ—ಆವನಾನೊರ್ವ, ಹರಿಃ—ವಿಷ್ಣುವು, ಸಃ—ಆತನು, ಶಿವಾ—ಪಾರ್ವತಿಯೆಂದು, ಸ್ಮೃತಃ—ನೆನೆಯಲ್ಪಟ್ಟನು.)

"ಅಥಸ್ವಿದಾಸೀತ್" ಎಂದು ಶ್ರುತಿಪ್ರಸಿದ್ಧವಾಗಿ, ಜೈಮಿನಿವಾಕ್ಯಪ್ರಸಿದ್ಧವಾಗಿ ನಾರಾಯಣನು ಶಿವಶಕ್ತಿಯೆಂಬುದನರಿದು ನಿಶ್ಚೈಸಲ್ಪಟ್ಟತ್ತಾಗಿ ಅಂತಪ್ಪ ನಾರಾಯಣನೇ ಸಕಲ ಬ್ರಹ್ಮಾಂಡೋತ್ಪತ್ತಿ ನಿಮಿತ್ತವಾಗಿ ಜಲಮಯವಾಗಿ ವ್ಯಾಪಿಸಿದನೆಂಬುದರ್ಕೆ ಶ್ರುತಿಯು ತೈತ್ತಿರೀಯೇ—ದೇವೀಸೂಕ್ತೇ:—

"ಅಪಾಮೇಕಾ ಮಹಿಮಾನಂ ಬಿಭರ್ತಿ॥" (ಅಪಾಂ—ಉದಕಂಗಳ, ಮಹಿಮಾನಂ—ಮಹತ್ವವನ್ನು, ಏಕ—ಒಬ್ಬಳಾದ ನಾರಾಯಣಿಯು, ಬಿಭರ್ತಿ—ಧರಿಸಿದಳು. ಹಾಂಗೆ,

ಅಭ್ರಣಿಸೂಕ್ತೇ—ಅಭ್ರಣಿಸೂಕ್ತದಲ್ಲಿ— "ಮಮಯೋನಿರಪ್ಸ್ವಂತಃ ಸಮುದ್ರಃ" (ಅಪ್ಸ್ವಂತಸ್ಸಮುದ್ರಃ—ಉದಕಂಗಳಲ್ಲಿಯುಂಟಾದ ಸಮುದ್ರವು, ಮಮ ಯೋನಿಃ—ಎನ್ನ ಯೋನಿ ಎಂದು ಪೇಳ್ದನು.) ಮತ್ತಂ ಶ್ರುತ್ಯಂತರಂಗಳಲ್ಲಿ:—

"ಆಪೋವಾ ಇದಂ ಸರ್ವಂ" ಎಂದುದಾಗಿ, (ಇದಂ ಸರ್ವಂ—ಈ ಸಮಸ್ತವೂ, ಆಪೋವಾ—ಉದಕಮಯವಾದರೂ ಆಗಲಿ) ಅಂತಪ್ಪ

ಜಲಮಯವಾದ ವಿಷ್ಣುವಿನಲ್ಲಿ ತನ್ನ ವೀರ್ಯವಂ ಬಿಡಲಾಗಿ ಸುವರ್ಣ ಮಯವಾದ ಬ್ರಹ್ಮಾಂಡಂಗಳೊಗೆದುವು. ಅದಱಿಂದೆ "ಸರ್ವಂ ವಿಷ್ಣು ಮಯಂ ಜಗತ್" ಎಂಬ ವಾಕ್ಯಕ್ಕೆ ವಿಷ್ಣುವೇ ಶಿವಶಕ್ತಿಯೆಂಬುದನ ಱಿಯದೆ ವಿಕಾರಾರ್ಥಂಗಳಂ ಮಾಱ್ಪುದು ಭವಕ್ಕೆ ಹೇತುವೆಂಬುದೀ ಸೂತ್ರದತಾತ್ಪರ್ಯಾರ್ಥಂ.

ಪದ ॥ ಅನುಮತಿಯಿಂದೆ ಪ್ರಕೃತಿಪುರುಷಾಹ್ವಯ ।
ಮೆನಿಸುವುದೆರಡುಂಟು ಪ್ರಕೃತಿಯೇ ಮಾಯೆಯಾ ।
ತ್ಮನೆ ಪುರುಷನು ವಿಷ್ಣುವೆ ಮಾಯೆಯೆನಿಪನು ।
ಘನ ಶ್ರುತಿ ವಾಸುದೇವಃ ಪರಾ ಪ್ರಕೃತಿ ಯೆಂ ।
ದೆನಲು ಮಾಯಾಂತುಪ್ರಕೃತಿಂ ವಿದ್ಯಾತ್ ಯೆಂ ।
ದೆನುತೆ ಶ್ವೇತಾಶ್ವತರಂ ಪೇೞ್ದುದು ಮಾ ।
ಯಿನಂತು ಮಹೇಶ್ವರ ಮೆನುತ್ತೆ ಮತ್ತುಸಿರ್ದುದ ।
ದನು ಪ್ರಕೃತಿಸ್ತ್ವಂಸುರಶ್ರೇಷ್ಠ ಪುರುಷೋಽಹ ।
ಮೆನಿಪ ಶಂಕರವಾಕ್ಯಮುಂಟು ಹರಿಯಂ ಕೂರ್ತು ।
ವನಮಾಲಿಯಾದ ಕಾರಣ ಮಾಯಾ ಸರ್ವಜೀ ।
ವನರೂಪನಾಂತ ನಾಪಏವಸಸರ್ಜಾದೌ ।
ಎನುತೆ ತಾಸುವೀರ್ಯಮುಪಾಸೃಜತ್ ತದಂಡ ।
ವನೆ ಹಿರಣ್ಮಯವೆಂದು ಶ್ರುತಿಯುಸಿರ್ದುದು ಮತ್ತೆ ।
ವಿನಿಯೋಗಕಾಲದೊಳಾ ಶಕ್ತಿ ನಾಲ್ಕು ರೂ ।
ಪನೆ ತಾಳ್ದಳೆಂತೆನೆ ಭೋಗೇ ಭಾವಾನೀ ಸಂ ।
ಜನಿತಾಪುರುಷೇಷು ವಿಷ್ಣುಃ ಕೋಪೇಚ ಕಾಳೀ ।
ಯನುಪಮಸಮರೇಷು ದುರ್ಗಾ ಯೆಂದು ಭೋಂ ।
ಕನೆ ಪೇೞ್ದುವು ಪೌರಾಣವಾಕ್ಯಂಗಳು ।
ವನಜನಾಭ ಸುಭೃತ್ಯನೆನಿಸಿದನದಱಿಂದೆ ।
ಫಣಿಭೂಷಣನಿತ್ತನವಗೆ ಸರ್ವಾಧಿಕ್ಯ ।
ವನು ಲೋಕನಟನೆಗೋಸುಗ ವಿಷ್ಣುಮಾಯೆಯಿಂ ।
ಮನುಮುನಿಗಳು ಭ್ರಾಮಕರಾಗಿ ಜ್ಯೋತಿರ್ಮ ।
ಯನ ನಿಜವನು ಕಾಣದೆ ಭವಗಿಳಿವರು ।
ವಿನುತಿಸುತಿಪವೀ ಸಕಲವೇದಂಗಳೀ ।

ಶನ ನಿಜವನು ಕಾಣದೆಯುವರರ್ಥವ ।
ಮನುಜರೆಲ್ಲರು ಕೆಟ್ಟರು ಮಾಯಾತೀ ।
ತನ ನೆಲೆಯನು ಕಾಣರು ಭ್ರಮಿಸುತೆ ಯು ।
ಮನ ಪುರವನು ಸಾರ್ದರು ಮತದ್ವೇಷ ।
ವನು ಮಾಡಿ ವೈಷ್ಣವರು ನಾರಕಲೋಕ ।
ವನು ಸಾರ್ದರೆಂದೆಂದಿಗಳಿವಿಲ್ಲದವರು ॥೨॥

ಅಂತೆಪ್ಪ ನಿಷ್ಕಲಪರಬ್ರಹ್ಮವೇ ಜಗದುಪಾದಾನನಿಮಿತ್ತಮಾಗಿ ಪ್ರಕೃತಿಪುರುಷತ್ವಮಂ ತಾಳ್ದುದು. ಪ್ರಕೃತಿಯೆಂದೊಡೆ ಮಾಯೆ. ಪುರುಷನೆಂದೊಡೆ "ಪುರುಷೋ ವೈ ರುದ್ರಃ" ಎಂಬ ಶ್ರುತಿಪ್ರಸಿದ್ಧಮಾಗಿ ಪುರುಷವಾಚ್ಯನೇ ರುದ್ರನು. ಅಂತಪ್ಪ ಮಾಯೆಯೇ ವಿಷ್ಣುವೆಂದು ವೇದಪುರುಷಂ ಪೇಳ್ದನು. "ವಾಸುದೇವಃ ಪರಾ ಪ್ರಕೃತಿಃ" ಎಂದು ಶ್ರುತಿ ಪೇಳ್ದುದಾಗಿ, ಮತ್ತಂ "ಮಾಯಾಂ ತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ॥" (ಪ್ರಕೃತಿಂ—ಅಂತಪ್ಪ ವಿಷ್ಣುವೆಂಬ ಪ್ರಕೃತಿಯನ್ನು, ಮಾಯಾಂ ತು–ಮಾಯೆ ಯೆಂದು, ವಿದ್ಯಾತ್–ಅಱಿವುದು, ಮಹೇಶ್ವರಂ—ಪುರುಷಶಬ್ದವಾಚ್ಯನಾದ ಮಹಾದೇವನನ್ನು, ಮಾಯಿನಂ—ವಿಷ್ಣುವೆಂಬ ಮಾಯೆಯನುಳ್ಳವನೆಂದು, ವಿದ್ಯಾತ್—ಅಱಿವುದು) ಎಂದು ಶ್ವೇತಾಶ್ವತರಂ ಪೇಳ್ದುದಾಗಿ, ಹರಿಯ ಕೊರ್ತು ಮಹಾದೇವಂ ಪೇಳ್ದನು. ಸ್ಕಾಂದೇ ಕಾಳಿಕಾಖಂಡೇ ಶರಭಾಧ್ಯಾಯೇ:—

"ಪ್ರಕೃತಿಸ್ತ್ವಂ ಸುರಶ್ರೇಷ್ಠ ಪುರುಷೋಽಹಂ ನ ಸಂಶಯಃ" (ಸುರಶ್ರೇಷ್ಠ—ಎಲೆ ದೇವಶ್ರೇಷ್ಠನಾದ ವಿಷ್ಣುವೆ, ತ್ವಂ—ನೀನು, ಪ್ರಕೃತಿಃ—ಮಾಯೆಯು, ಅಹಂ—ನಾನು, ಪುರುಷಃ—ತತ್ಪತಿಯಾದ ಪುರುಷನು, ನ ಸಂಶಯಃ—ಸಂದೇಹವಿಲ್ಲ.) ಅಂತಪ್ಪ ವಿಷ್ಣುವೇ ಸೃಷ್ಟಿನಿಮಿತ್ತಮಾಗಿ ಜಲಮಯಮಾದನು. ಆವುದಕದಲ್ಲಿ ತನ್ನ ವೀರ್ಯಮಂ ಬಿಡಲಾಗಿ ಅನೇಕ ಬ್ರಹ್ಮಾಂಡಂಗಳೊಗೆದುವು. ಹೀಗೆಂದು ಮಹೋಪನಿಷತ್ತಿನಲ್ಲಿ ಪೇಳ್ದುದು. ಸಾಕ್ಷಿ— "ಅಪ ಏವ ಸಸರ್ಜಾದೌ ತಾಸು ವೀರ್ಯಮಪಾಸೃಜತ್ ॥ ತಂ ದಂಡಮಭವದ್ಧೈಮಂ ವಿಶ್ವಸ್ಯಾಯತನಂ ಮ

ಹತ ॥" (ಆದೌ_ಮೊದಲಲ್ಲಿ, ತು—ಆ ನಾರಾಯಣನನ್ನು, ಅಪಏವ—ಉದಕಮನಾಗಿಯೇ, ಸಸರ್ಜ—ಸೃಷ್ಟಿಸಿದನು, ತಾಸು—ಆ ಉದಕಮಯನಾದ ನಾರಾಯಣನಲ್ಲಿ, ವೀರ್ಯಂ—ತನ್ನ ಇಂದ್ರಿಯವನ್ನು ಅವಾಸೃಜತ್—ಬಿಟ್ಟನು, ಆ ಇಂದ್ರಿಯವು ವಿಶ್ವಸ್ಯ-ವಿಶ್ವಕ್ಕೆ, ಆಯತನಂ—ಸ್ಥಾನವಾದಂಥಾ, ಮಹತ್—ದೊಡ್ಡಿತಾದಂಥ, ಹೈಮಂ—ಸುವರ್ಣಮಯವಾದಂಥ, ಅಂಡಂ—ಬ್ರಹ್ಮಾಂಡವು, ಅಭವತ್—ಆಯಿತು.) ಈಯರ್ಥದಲ್ಲಿ— ಲೈಂಗ್ಯಪುರಾಣದಲ್ಲಿ ವಿಷ್ಣುವಾಕ್ಯಂ:—

"ಅಸ್ಯ ಮಾಯಾವಿಧಿಜ್ಞಸ್ಯ ವಿಗುಹ್ಯ ಗಗನಸ್ಯಚ । ಪುರಾ ಲಿಂಗಾದಭೂದ್ಬೀಜಂ ಪ್ರಥಮಂತ್ವಾದಿಸರ್ಗಿಕಂ ॥ ಮಮಯೋನೌ ಸಮಾಸಿಕ್ತಂ ತದ್ಬೀಜಂ ಕಾಲಪರ್ಯಯಾತ್ । ಹಿರಣ್ಮಯಮಕೂಪಾರೇ ಯೋನ್ಯಾಮಂಡಮಜಾಯತ ॥" (ಮಾಯಾವಿಧಿಜ್ಞಸ್ಯ—ಮಾಯಾಸ್ವರೂಪವನು ಬಲ್ಲಂಥ, ವಿಗುಹ್ಯಗಗನಸ್ಯಚ—ಚಿದಾಕಾಶಮಧ್ಯದಲ್ಲಿ ಗೋಪ್ಯನಾದಂಥ, ಅಸ್ಯ—ಈ ಪರಮೇಶ್ವರನ, ಲಿಂಗಾತ್—ಪುಲ್ಲಿಂಗದತ್ತಣಿಂದೆ, ಪ್ರಥಮಂ—ಮೊದಲು, ತು—ವಿಶೇಷವಾಗಿ, ಆದಿಸರ್ಗಿಕಂ—ಮೊದಲ ಸೃಷ್ಟಿಗೆ ಕಾರಣವಾಗಿದ್ದ, ಬೀಜಂ—ವೀರ್ಯವು, ಪುರಾ—ಪೂರ್ವದಲ್ಲಿ ಅಭೂತ್—ಆಯಿತು, ತದ್ಬೀಜಂ—ಆ ವೀರ್ಯವು, ಕಾಲಪರ್ಯಯಾತ್—ಕಾಲಪರ್ಯಾಯದತ್ತಣಿಂದೆ, ಮಮ—ನನ್ನ, ಯೋನೌ—ಯೋನಿಯಲ್ಲಿ, ಸಮಾಸಿಕ್ತಂ—ಚೆನ್ನಾಗಿ ಇರಿಸಲ್ಪಟ್ಟಿತು, ಅಕೂಪಾರೇ ಯೋನ್ಯಾಂ—ಸಮುದ್ರಮಯವಾದ ನನ್ನ ಯೋನಿಯಲ್ಲಿ, ಹಿರಣ್ಮಯಂ—ಸುವರ್ಣಮಯವಾದಂಥ, ಅಂಡಂ—ಬ್ರಹ್ಮಾಂಡವು, ಅಜಾಯತ—ಹುಟ್ಟಿತು) ಸಮುದ್ರಮಯನಾದ ಯೋನಿ ಎಂಬುದಱಿಂದೆ ಜಲಮಯನಾಗಿ ವ್ಯಾಪಿಸಿರ್ದನೆಂದಱಿವುದು. ಮತ್ತಂ ಶಿವಸಂಕಲ್ಪೋಪನಿಷತ್ತಿನಲ್ಲಿ:—

"ಅಂಡಂ ಹಿರಣ್ಮಯಂ ಮಧ್ಯೇ ಸಮುದ್ರಂ ರುದ್ರಸ್ಯ ವೀರ್ಯಾತ್ ಪ್ರಥಮಂ ಬಭೂವ" (ಮಧ್ಯೇಸಮುದ್ರಂ—ವಿಷ್ಣುವಿನ ಯೋನಿಯೆಂಬ ಸಮುದ್ರಮಧ್ಯದಲ್ಲಿ, ರುದ್ರಸ್ಯ—ರುದ್ರನ, ವೀರ್ಯಾತ್—ವೀರ್ಯದತ್ತಣಿಂದೆ, ಪ್ರಥಮಂ-ಮೊದಲು, ಹಿರಣ್ಮಯಂ—ಸುವರ್ಣ ಮಯವಾದ,

ಅಂಡಂ—ಬ್ರಹ್ಮಾಂಡವು, ಬಭೂವ—ಆಯಿತು.) ಅಷ್ಟರಮೇಲೆ ಅನೇಕ ವಿಷ್ಣುಗಳು ಅನೇಕ ಬ್ರಹ್ಮರೊಗೆದರೆಂದಱಿವುದು.

ಮತ್ತಂ ಆ ಶಕ್ತಿ ನಾಲ್ಕು ಪ್ರಕಾರವಾದಳ್. ಎತೆಂದೊಡೆ:— ಪುರಾಣಾಂತರೇ:—

"ಏಕೈವ ಶಕ್ತಿಃ ಪರಮೇಶ್ವರಸ್ಯ ಭಿನ್ನಾ ಚತುರ್ಧಾ ವಿನಿಯೋಗಕಾಲೇ । ಭೋಗೇ ಭವಾನೀ ಪುರುಷೇಷು ವಿಷ್ಣುಃ ಕೋಪೇಚ ಕಾಳೀ ಸಮರೇಷು ದುರ್ಗಾ ॥" (ವಿನಿಯೋಗಕಾಲೇ—ಭೃತ್ಯತ್ವಮನಾಚರಿಪ ಕಾಲದೊಳು, ಪರಮೇಶ್ವರಸ್ಯ—ಪರಮೇಶ್ವರನ, ಏಕೈವ ಶಕ್ತಿಃ—ಒಬ್ಬ ಶಕ್ತಿಯೇ, ಚತುರ್ಧಾ—ನಾಲ್ಕು ಪ್ರಕಾರವಾಗಿ, ಭಿನ್ನಾ—ಬೇರ್ಪಡಿಸಲ್ಪಟ್ಟಳು. ಭೋಗೇ—ಭೋಗದಲ್ಲಿ, ಭವಾನೀ—ಪಾರ್ವತಿಯಾದಳು. ಪುರುಷೇಷು—ಪುರುಷರುಗಳಲ್ಲಿ, ವಿಷ್ಣುಃ—ವಿಷ್ಣುವಾದಳು. ಕೋಪೇಚ—ಕೋಪದಲ್ಲಿ, ಕಾಳೀ—ಕಾಳಿಕಾದೇವಿಯಾದಳು. ಸಮರೇಷು—ಕಾಳೆಗದಲ್ಲಿ, ದುರ್ಗಾ—ದುರ್ಗೆಯಾದಳು.) ಈ ತೆಱದಿಂದಾದಿಶಕ್ತಿಯೇ ಭೃತ್ಯತ್ವಮನಾಚರಿಸಲೋಸುಗವಾಗಿ ವಿಷ್ಣುರೂಪದಳೆದಳೆಂಬುದಂ ಸಿದ್ಧಾಂತಗೊಳಿಸುವ ಸೂತ್ರದ ಬಹುವಾಕ್ಯದ ತಾತ್ಪರ್ಯವಿಂತೆಂದಱಿವುದು. ॥೨॥

ಪದ ॥ ಮನಸಿಜರಿಪು ಸಕಲಕೆ ಸೃಷ್ಟಿಕರ್ತನೆಂ ।
ದೆನುತಿಹ ಶ್ರುತಿವಾಕ್ಯಂಗಳನಾಲಿಸು ।
ಸನುಮತಿಯಿಂದೆ ನೀಂ ಸೋಮಃ ಪವತೇ ।
ಜನಿತಾ ಮತೀನಾಂ ಜನಿತಾ ದಿವೋ ಸಂ ।
ಜನಿತಾ ಪೃಥಿವ್ಯಾ ಜನಿತಾಗ್ನಿಃ ಪರಾ ।
ಜನಿತಾ ಸೂರ್ಯಸ್ಯ ಜನಿತಾ ಇಂದ್ರಸ್ಯ ।
ಜನಿತಾಥ ವಿಷ್ಣೋಃ ಎಂದೆನೆ ಋಗ್ವೇದ ।
ಬಿನುಗುಮತಿಯೆ ಸೋಮ ವೆಂದೊಡಮೃತವಲ್ಲಿ ।
ಯೆನುತಿಹೆ ಬಳ್ಳಿ ಪೃಥಿವ್ಯಾಕಾಶಂಗ ।
ಳನಿಲ ವಹ್ನಿಸೂರ್ಯೇಂದ್ರ ವಿಷ್ಣುಮುಂತಾದರ ।
ಜನನಕ್ಕೆ ಕಾರಣವಾಗಲಾರ್ಪುವೆ ನಿನ್ನ ।

ಮನದ ತಮೋಗುಣಕೇನೆಂಬೆ ಸೋಮ ಎಂ |
ಬೆನೆ ಗಿರಿಜೇಶನೆಂಬುದಕೆ ಕೇಳೈ ಶ್ರುತಿ |
ಯನು ನಮಸ್ಸೋಮಾಯ ಚ ರುದ್ರಾಯ ಚ |
ಎನಲು ಯಜುರ್ವೇದವಾದಿತ್ಯಪುರಾಣ |
ದನುಮತಿ ಯುಮಯಾಸಹಿತೋ ದೇವ ಯೆಂ |
ದೆನುತಲಾತನೆ ಸೋಮನಾತನೆ ಸಕಲ ಕಾ |
ರಣನೆಂದು ನುತಿಪುದುಪಬೃಂಹಣವಾಕ್ಯ |
ವನು ನಂಬದಿರ್ಪೆಯಾದೊಡೆ ಮತ್ತದನುಸಿ |
ರ್ಪೆನು ಬ್ರಹ್ಮವಿಷ್ಣುರುದ್ರೇಂದ್ರಾದ್ರಾಸ್ತೇ ಸಂಪ್ರಸೂಯಂ |
ತೆ ನುತೆ ಶಂಭುರಾಕಾಶಮಧ್ಯೇ ಧ್ರುವಂ ಎಂದಥ |
ರ್ವಣವಾಕ್ಯಮುಂಟಾಗಿ ದ್ಯಾವಾಭೂಮೀ |
ಜನರ್ಯ ದೇವ ಏಕ ಏವ ಎಂ |
ದೆನುತೆ ಋಗ್ವಿನುತಿಸ ಲೇಕ ಏವ ಹಿ ರುದ್ರೋ |
ಯೆನುತಥರ್ವಣಶಿಖೆಯುಸಿರ್ವುದೀ |
ಶನ ನೆಲೆಯನು ಕಾಣದಾದೆಯಲ್ಲ ತ್ರೈಮೂರ್ತಿಗ |
ಳನು ಸೃಜಿಸದನಲ್ಲ ಆದಿಯ ರುದ್ರ |
ನನುವು ತಾ ತೋಱದಲ್ಲ ನಾಲ್ಕನೆಯವ |
ನೆನುತಿವೆ ಶ್ರುತಿಗಳಲ್ಲ ಮಾಂಡೂಕ್ಯದೊಳ್ |
ಘನಶಿವಮದ್ವೈತಂ ಚತುರ್ಥ ಮೆಂಬುದಲ್ಲ ||೩||

ಸಾಂಬಸದಾಶಿವನೆಯೆ ವಿಷ್ಣುಬ್ರಹ್ಮ ಮೊದಲಾದ ಸಚರಾಚರಂಗ ಳಿಗೆಯುಂ ಸೃಷ್ಟಿಕಾರಣನೆಂಬುದರ್ಕೆ ಶ್ರುತಿ.– ಋಗ್ವೇದೇ:—

"ಸೋಮಃ ಪವತೇಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ ಜನಿತಾಗ್ನಿರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತಾಥ ವಿಷ್ಣೋಃ" (ಸೋಮಃ–ಉಮಾಸಹಿತನಾದ ಪರಮೇಶ್ವರನು, ಪವತೇ ರ್ಜನಿತಾ–ವಾಯುವಿನ ಜನನಕ್ಕೆ ಕಾರಣನಾದಾತನು, ಮತೀನಾಂ ಜನಿತಾ–ಸಮಸ್ತ ಬುದ್ಧಿಗಳ ಜನನಕ್ಕೆ ಕಾರಣನಾದಾತನು, ದಿವಃ–ಆಕಾಶಕ್ಕೆ, ಜನಿತಾ–ಜನನಕ್ಕೆ ಕಾರಣನು, ಪೃಥಿವ್ಯಾಃ–ಭೂಮಿಗೆ, ಜನಿತಾ–ಜನನಕ್ಕೆ ಕಾರಣನು, ಅಗ್ನಿಃ–ಅಗ್ನಿಗೆ, ಜನಿತಾ–ಜನನಕ್ಕೆ ಕಾರಣನು,

ಸೂರ್ಯಸ್ಯ—ಸೂರ್ಯಂಗೆ, ಜನಿತಾ—ಜನನಕ್ಕೆ ಕಾರಣನು, ಇಂದ್ರಸ್ಯ—ದೇವೇಂದ್ರಂಗೆ, ಜನಿತಾ—ಜನನಕ್ಕೆ ಕಾರಣನು, ಅಥ—ಅನಂತರದಲ್ಲಿ, ವಿಷ್ಣೋಃ—ನಾರಾಯಣನಿಗೆ, ಜನಿತಾ—ಜನನಕ್ಕೆ ಕಾರಣನು.) ಇಂತಪ್ಪ ಶ್ರುತ್ಯರ್ಥಮಂ ವ್ಯತ್ಯಾಸಂಗೆಯ್ದು, "ಸೋಮಃ" ಎಂದೊಡೆ ಅಮೃತವಲ್ಲಿಯೆಂದರ್ಥಮಂ ಮಾಳ್ಪರಜ್ಞರು.

"ನಮಸ್ಸೋಮಾಯ ಚ ರುದ್ರಾಯ ಚ" ಎಂದು ಸೋಮಶಬ್ದ ವಾಚ್ಯನು ರುದ್ರನೆಂದು ಶ್ರೀರುದ್ರಸೂಕ್ತಮಧ್ಯದಲ್ಲಿ ಪಠಿತವಾದ ಕಾರಣದಿಂ; ಮತ್ತಮಾದಿತ್ಯಪುರಾಣದಲ್ಲಿ:—

"ಉಮಯಾ ಸಹಿತೋ ದೇವ ಸ್ಸೋಮ ಇತ್ಯುಚ್ಯತೇ ಬುಧೈಃ। ಸಏವ ಕಾರಣಂ ನಾನ್ಯೋ ವಿಷ್ಣೋರಪಿ ಚ ವೈ ಶ್ರುತಿಃ॥" (ಉಮಯಾ—ಪಾರ್ವತೀ ದೇವಿಯೊಡನೆ, ಸಹಿತಃ—ಸಹಿತನಾದ, ದೇವಃ—ದೇವನು, ಸೋಮ ಇತಿ—ಸೋಮನೆಂದು, ಬುಧೈಃ—ವಿದ್ವಾಂಸರಿಂದ, ಉಚ್ಯತೇ—ಹೇಳಲ್ಪಡುತ್ತಿಹನು. ಸ ಏವ— ಆ ಮಹಾದೇವನೆ, ವಿಷ್ಣೋರಪಿ ಚ—ನಾರಾಯಣಂಗಾದೊಡೆಯುಂ, ಕಾರಣಂ—ಕಾರಣನು, ಅನ್ಯಃ—ಮತ್ತೊರ್ಬನು, ನ—ಇಲ್ಲ. ಇತಿ—ಹೀಗೆಂದು, ಶ್ರುತಿಃ—ಶ್ರುತಿಯು, ಆಹ ಚ—ಹೇಳುತ್ತಾಗಿ; ಮತ್ತಂ

"ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ॥" "ನಕಾರಣಂ ಕಾರಣಂತು ಧ್ಯೇಯಃ॥" "ಸರ್ವೈಶ್ವರ್ಯಸಂಪನ್ನಸ್ಸರ್ವೇಶ್ವರಶ್ಶಂಭುರಾಕಾಶಮಧ್ಯೇ ಧ್ರುವಂ॥" (ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ—ಬ್ರಹ್ಮ ವಿಷ್ಣು ರುದ್ರ ಇಂದ್ರ ಮೊದಲಾದವರು, ಸಂಪ್ರಸೂಯಂತೇ—ಹುಟ್ಟಿಸಲ್ಪಡುತ್ತಾರೆ.) (ನಕಾರಣಂ—ತನಗೊಂದು ಕಾರಣರಹಿತನು, ಕಾರಣಂ ತು—ಸರ್ವಕಾರಣನಾದ, ಶಂಭುಃ—ಶಂಕರನು, ಧ್ಯೇಯಃ—ಧ್ಯಾನಕ್ಕೆ ಯೋಗ್ಯನು) (ಸರ್ವೈಶ್ವರ್ಯಸಂಪನ್ನಃ—ಷಡ್ಗುಣೈಶ್ವರ್ಯ ಸಂಪನ್ನನು, ಸರ್ವೇಶ್ವರಃ—ವಿಷ್ಣು ಮೊದಲಾದ ಸರ್ವರಿಗೂ ಒಡೆಯನು. ಆಕಾಶಮಧ್ಯೇ ಧ್ರುವಂ—ಸಮಸ್ತ ಪ್ರಾಣಿಗಳ ಹೃದಾಕಾಶಮಧ್ಯದಲ್ಲಿ ನಿತ್ಯನಾದಾತನು.) ಇಂತೆಂದು ಅಥರ್ವಶಿಖೆ ಪೇಳುತ್ತಾಗಿ; ಮತ್ತಂ ಋಗ್ವೇದದಲ್ಲಿ:—

"ದ್ಯಾವಾಭೂಮೀ ಜನಯನ್ ದೇವ ಏಕ ಏವ॥" (ಏಕ ಏವ ದೇವಃ—ಮಹಾದೇವನೊರ್ವನೆ, ದ್ಯಾವಾಭೂಮೀ—ಆಕಾಶವೇ ಮೊದಲಾಗಿ ಪೃಥ್ವಿಯೇ ಕಡೆಯಾದ ಪಂಚಮಹಾಭೂತಂಗಳನ್ನು, ಜನಯನ್—ಸೃಷ್ಟಿಸಿದನು.) ಮತ್ತಂ ಯಜುರ್ವೇದದಲ್ಲಿ:—

"ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ॥" (ಏಕ ಏವ ರುದ್ರಃ—ಸರ್ವಕಾರಣನಾದಾತನೊರ್ವನೇ ರುದ್ರನು. ನದ್ವಿತೀಯಾಯ—ಎರಡಿಲ್ಲದುದಕ್ಕೋಸುಗ, ತಸ್ಥೇ—ಇರ್ದನು.) ಮತ್ತಂ ಮಾಂಡೂಕ್ಯೋಪನಿಷತ್ತಿನಲ್ಲಿ:—

"ಶಿವಮದ್ವೈತಂ ಚತುರ್ಥಂ ಮನ್ಯಂತೇ॥" (ಅದ್ವೈತಂ—ಎರಡಿಲ್ಲದಂತಹ, ಶಿವಂ—ಶಿವನನ್ನು, ಚತುರ್ಥಂ—ತ್ರಿಮೂರ್ತಿಗಳತ್ತಣಿಂದೆ ನಾಲ್ಕನೆಯವನೆಂದು, ಮನ್ಯಂತೇ—ತಿಳಿಯುತ್ತಿಹರು.) ಅಂತಪ್ಪ ಸಾಂಬ ಸದಾಶಿವನೇ ಸರ್ವಕಾರಣನೆಂಬುದಂ ತಿಳಿದು ಮತದ್ವೇಷದಿಂ ಸ್ವೇಚ್ಛಾವಿಕಾರಾರ್ಥಂಗಳಂ ಮಾಳ್ಪ ವೈಷ್ಣವಾದಿಗಳೆಲ್ಲರ್ ನಿರಯಕ್ಕೆ ಹೇಸರು. ಎಂಬುದೀ ಸೂತ್ರದ ಬಹುಶಬ್ದದ ನಿರ್ವಚನಾರ್ಥಂ. ॥೩॥

ಪದ ॥ ಶ್ರೀಕರರುದ್ರನೆ ಬ್ರಹ್ಮವೆಂಬುದಕೆ ನೀಂ ।
ಜೋಕೆಯಿಂದಲಿ ಕೇಳು ತತ್ಪರಂ ಬ್ರಹ್ಮ ಸ ।
ಏಕ ಸ್ಸ ಏಕೋ ರುದ್ರಃ ಸ ಈಶಾನ ।
ಏಕಮೇವಾದ್ವಿತೀಯಂ ಬ್ರಹ್ಮ ಎಂದು ಸ ।
ಮಾಕೀರ್ಣವಾಗಿ ಅಥರ್ವಶಿರಸ್ಸು ವು ।
ಮಾಕಾಂತನನುಸಿರ್ವುದು ಈಶಾನಶ್ಶಿವ ।
ಏಕೋ ಧ್ಯೇಯಃ ಎಂದು ಮತ್ತುಸಿರ್ವುದು ।
ಪ್ರಾಕಟ್ಯವಾಗಿ ತ್ರಿಯಂಬಕಂ ಯಜಾಮಹೇ ।
ತ್ಯಾಕಾಂಕ್ಷೆಯಿಂ ತ್ರಿಮೂರ್ತಿಗಳಿಗೊಡೆಯನು ಪಿ ।
ನಾಕಿಯೇ ಎಂಬ ಋಗ್ವೇದವಾಕ್ಯವನು ನಿ ।
ರಾಕರಿಸದೆ ತ್ರಿದೇವಾನಾಂ ತ್ರಿವೇದಾನಾಂ ।
ಏಕ್ಯೆವ ಬ್ರಹ್ಮಕ್ಷತ್ರಿಯವಿಶಾಮಪಿ ಯೆಂದು ।
ತಾ ಕರ್ತುರ್ವಾಹ್ಯಂಬಾಮಹಾದೇವೋ ಶಿ ।
ವಾಕಾಂತನನಂಬಕೋಥತ್ರಿಯಂಬಕ ।

ನಾಕಾರವಮೂರ್ತಿಯು ನಿಂತೆಂದಾದಿತ್ಯದೊಳ್ ।
ಶ್ರೀಕಂಠನೆ ತ್ರಿಮೂರ್ತಿಗಳ ಕಾರಣನೆಂದು ।
ವ್ಯಾಕುಲರಹಿತಮಪ್ಪಂತುಸಿರ್ವುದು ಅವಿ ।
ವೇಕದಿಂ ನಾರಾಯಣಪರಂಬ್ರಹ್ಮ ಎಂ।
ದಾಕಡುಶ್ರುತಿಯು ಪಂಚವ್ಯರ್ಥವ ಕಾಣ ।
ದೇಕೆ ಭ್ರಮಿಸಿ ಪರಾತ್ಪರತರೋ ಬ್ರಹ್ಮಾ ಕು ।
ಭಾಕರಮೆನೆ ಪರಾತ್ಪರತರೋ ಹರಿ ವಿಷ ।
ಮಾಕೃತಿಯಂ ತತ್ಪರತರೋ ಈಶ ಯೆಂ ।
ದಾಕಪರ್ದಿಯನು ನಾರಾಯಣನತ್ತಣಿಂ ।
ದೇಕೀಕರಿಸದೆ ತತ್ಪರನೆಂದು ಪೇಳ್ದಿರ್ದಾ ।
ಲೋಕಿಸು ಶಿವಸಂಕಲ್ಪೋಪನಿಷತ್ತಿದ ।
ಙಾಕಾರವ ಕಾಣದೆ ಶಾಸ್ತ್ರಂಗಳ ।
ನೇಕವನೀನೋಡದೆ ರೌರವಕೆ ನೀ ।
ನೇಕೆ ಬೀಳುವೆ ಬಿಡದೆ ಗೌತಮಶಾಪ ।
ವೇಕೆ ತಾಂ ಮಾಣ್ದಪುದೆ ವಿಷ್ಣುವ ನಂಬಿ ।
ಲೋಕವೆಲ್ಲವು ಭವಕಿಳಿದುದಲ್ಲದೇ ॥೪॥

ರುದ್ರನೇ ಪರಬ್ರಹ್ಮವೆಂದು ನಿರ್ಣೈಸುತ್ತಿರ್ದಪೆಂ. ಅದೆಂತೆಂದೊಡೆ—ಅಥರ್ವಶಿಖೆಯಲ್ಲಿ:—

"ಯೋ ವೈ ರುದ್ರಸ್ಸಭಗವಾನ್ ಯಶ್ಚ ಬ್ರಹ್ಮಾ ತಸ್ಮೈ ವೈ ನಮೋ ನಮೋ; ಯೋ ವೈ ರುದ್ರ ಸ್ಸಭಗವಾನ್ ಯ ಶ್ಚ ವಿಷ್ಣುಃ ತಸ್ಮೈ ವೈ ನಮೋ ನಮೋ; ಯೋ ವೈ ರುದ್ರಸ್ಸಭಗವಾನ್ ಯಶ್ಚ ಮಹೇಶ್ವರ ಸ್ತಸ್ಮೈ ವೈ ನಮೋನಮಃ" ಇತ್ಯುಪಕ್ರಮ್ಯ "ಯ ಓಂ ಕಾರಸ್ಸ ಓಂಕಾರೋ ಯಃಪ್ರಣವ ಸ್ಸ ಪ್ರಣವೋ ಯ ಸ್ಸರ್ವವ್ಯಾಪೀ ಸಸರ್ವ ವ್ಯಾಪೀ ಯೋ ನಂತ ಸ್ಸೋನಂತೋ ಯತ್ತಾರಂ ತತ್ತಾರಂ ಯತ್ಸೂಕ್ಷ್ಮಂ ತತ್ಸೂಕ್ಷ್ಮಂ ತತ್ಪರಂಬ್ರಹ್ಮ ಸ ಏಕೋ ರುದ್ರಸ್ಸ ಈಶಾನ ಸ್ಸ ಭಗವಾನ್ ಮಹೇಶ್ವರಃ ಮಹಾದೇವಃ" * (ಯಃ—ಆವನಾನೊರ್ಬ,

* ಸೂತ್ರದಲ್ಲಿ ಇಲ್ಲದ ಶ್ರುತಿಯುಂ ವ್ಯಾಖ್ಯಾನದಲ್ಲಿ ವಿಸ್ತಾರವಾಗಿ ಬರೆದೊಡೆ ದೋಷವಿಲ್ಲವಾಗಿ ವಿಸ್ತರದಿಂ ಬರೆಯುತಿರ್ದಪೆಂ.

ರುದ್ರಃ–ರುದ್ರನು, ಸಃ–ಆತನು, ಭಗವಾನ್–ಷಡ್ಗುಣೈಶ್ವರ್ಯ ಸಂಪನ್ನನು. ಯಶ್ಚ–ಅಂತಪ್ಪ ರುದ್ರನೇ, ಬ್ರಹ್ಮಾ–ಬ್ರಹ್ಮನು, ಯೋ ವೈರುದ್ರಃ–ಆವನಾನೊರ್ವರುದ್ರನು, ಸ ಭಗವಾನ್–ಆತನೇ ಷಡ್ಗುಣೈಶ್ವರ್ಯಸಂಪನ್ನನು. ಯಶ್ಚ–ಅಂತಪ್ಪರುದ್ರನೇ, ವಿಷ್ಣುಃ–ನಾರಾಯಣನು, ಯೋವೈರುದ್ರಃ–ಆವನಾನೊರ್ವ ರುದ್ರನು, ಸ ಭಗವಾನ್–ಆತನೇ ಷಡ್ಗುಣೈಶ್ವರ್ಯಸಂಪನ್ನನು. ಯಶ್ಚ–ಆ ರುದ್ರನೇ, ಮಹೇಶ್ವರಃ–ಕಾಲರುದ್ರನು. ತ್ರಿಮೂರ್ತಿಗಳಲ್ಲಿ ಅಂತರ್ಯಾಮಿಯಾಗಿ ಅವರವರಿಗೆ ಮಾಡಿದ ಪೂಜಾನಮಸ್ಕಾರಂಗಳಂ ತಾನೆ ಕೈಕೊಂಬನೆಂಬರ್ಥ. ಇತ್ಯುಪಕ್ರಮ್ಯ–ಹೀಗೆಂದುಪಕ್ರಮಿಸಿ, ಯಃ–ಆವುದಾನೊಂದು, ಓಂಕಾರಃ–ಓಂಕಾರವುಂಟು, ಸಃ–ಆ ರುದ್ರನು, ಓಂಕಾರಃ–ಓಂಕಾರರೂಪನು. ಯಃ–ಆವುದಾನೊಂದು, ಪ್ರಣವಃ–ಪ್ರಣವವುಂಟು, ಸಃ–ಆ ರುದ್ರನು, ಪ್ರಣವಃ–ಪ್ರಣವವೆಂಬ ಓಂಕಾರರೂಪನು. ಯಃ–ಆವುದಾನೊಂದು ಓಂಕಾರವು,ಸರ್ವವ್ಯಾಪೀ–ಸಮಸ್ತವನ್ನು ವ್ಯಾಪಿಸಿಹುದು, ಸಃ–ಆ ರುದ್ರನು, ಸರ್ವವ್ಯಾಪೀ–ಸರ್ವವ್ಯಾಪೀ ಎಂಬ ಓಂಕಾರರೂಪನು. ಯಃ–ಆವುದಾನೊಂದು ಓಂಕಾರವು, ಅನಂತಃ–ಕಡೆಯಿಲ್ಲದೆ ಇರ್ದಪುದು, ಸಃ–ಆ ರುದ್ರನು, ಅನಂತಃ–ಅನಂತವೆಂಬ ಓಂಕಾರರೂಪನು. ಯತ್–ಆವುದಾನೊಂದು ಓಂಕಾರವು, ತಾರಂ–ಭವಸಾಗರಮಂ ದಾಂಟಿಪುದಱಿಂದೆ ತಾರವೆನಿಪುದು, ತತ್–ಆ ಓಂಕಾರವು, ತಾರಂ–ತಾರಕಬ್ರಹ್ಮವಾದ ರುದ್ರನು, ಯತ್ಸೂಕ್ಷ್ಮಂ–ಆವುದಾನೊಂದು ಸೂಕ್ಷ್ಮರೂಪಿನಲ್ಲಿ ಅಂತರ್ಯಾಮಿಯಾದ ಓಂಕಾರವುಂಟು, ತತ್–ಆ ಸೂಕ್ಷ್ಮರೂಪವೆಂಬ ಪೆಸರನುಳ್ಳ ರುದ್ರನು, ತತ್–ಅಂತಪ್ಪ ಸರ್ವದೇವತಾವೈಲಕ್ಷಣ್ಯಮುಳ್ಳ ರುದ್ರತ್ವವೇ, ಪರಂಬ್ರಹ್ಮ–ಪರಬ್ರಹ್ಮವು. ಸಃ–ಅಂತಪ್ಪ ರುದ್ರನು, ಏಕಃ–ಎರಡಿಲ್ಲದಾತನು, ಸಃ–ಆತನು, ಏಕೋ ರುದ್ರಃ–ಎರಡಿಲ್ಲದ ರುದ್ರನು; ಎರಡುವೇಳೆ ದ್ವಿರುಕ್ತಿಯಾಗಿ ಏಕ ಶಬ್ದ ಪ್ರಯೋಗದಿಂದೆ ಅದ್ವಿತೀಯಪರಬ್ರಹ್ಮನು ರುದ್ರನೇ ಎಂದು ನಿರ್ಣೈಸಲ್ಪಟ್ಟುದು; "ದೇವ ಏಕೋ ನಾರಾಯಣಃ" ಎಂಬ ಶ್ರುತಿವಾಕ್ಯಂಗಳಿಗೆ ಅಂತರ್ಯಾಮಿಪರತ್ವದಿಂದೆ ರುದ್ರನೇ ಎಂದು ನಿರ್ಣೈಸಲ್ಪಟ್ಟುದು.

ಸಃ—ಅತನು, ಈಶಾನಃ—ಒಡೆಯನು, ಸಃ—ಆ ರುದ್ರನು, ಭಗವಾನ್—ಷಡ್ಗುಣೈಶ್ವರ್ಯಸಂಪನ್ನನು, ಸಃ—ಆರುದ್ರನು, ಮಹೇಶ್ವರಃ—ಮಹೇಶ್ವರನೆಂಬ ಪೆಸರುನುಳ್ಳವನು. ಸಃ—ಆ ರುದ್ರನು, ಮಹಾದೇವಃ—ಮಹಾದೇವನು.) ಈ ಪ್ರಕಾರದಿಂದೆ ಇಂತಪ್ಪ ರುದ್ರನೆ ಪರಬ್ರಹ್ಮವೆಂದು ಅಥರ್ವಶಿಖೆ ಪೇಳ್ದುದು, ಮತ್ತಂ

"ಈಶಾನಶ್ಶಿವ ಏಕೋ ಧ್ಯೇಯಃ, ಶಿವಂಕರಃಸರ್ವಮನ್ಯತ್ಪರಿತ್ಯಜ್ಯ"

ಎಂದು ಅಥರ್ವಶಿಖೆ (ಶಿವನೊರ್ವನೇ ಧ್ಯಾನಕ್ಕೆ ಯೋಗ್ಯನು ಮತ್ತೆ ಕೆಲವಾದ ಸಮಸ್ತವನ್ನು ಬಿಡಲ್ತಕ್ಕುದೆಂದು) ಪರಿಸಮಾಪ್ತಿಯನ್ನೈದಿತಾಗ್ಗಿ;

ಮತ್ತಂ ಋಗ್ವೇದದಲ್ಲಿ:—

"ತ್ರಿಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ । ಊರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥" (ಸುಗಂಧಿಂ—ಪುಷ್ಪಗಂಧನ್ಯಾಯದೋಪಾದಿಯಲ್ಲಿ ಎಡೆವಿಡದೆ, ಪುಷ್ಟಿವರ್ಧನಂ—ಪೋಷಿಸುವುದಱಿಂದೆ ಸಮಸ್ತ ಜಗತ್ತನ್ನು ವರ್ಧಿಸುತ್ತಿರ್ದಂಥ, ತ್ರಿಯಂಬಕಂ—ಮೂಱು ನೇತ್ರಗಳನುಳ್ಳಂಥ, ಮತ್ತಂ ತ್ರಿಮೂರ್ತಿಗಳಿಗೆ ತಂದೆಯಾದಂಥ ಮಹಾದೇವನನ್ನು, ಯಜಾಮಹೇ—ಪೂಜಿಸಿಹೆವು. ಬಂಧನಾತ್—ತೊಟ್ಟಿನ ದೆಸೆಯಿಂದ, ಊರ್ವಾರುಕಮಿವ—ಸೌತೆಯ ಹಣ್ಣಿನೋಪಾದಿಯಲ್ಲಿ, ಮೃತ್ಯೋಃ-ಕಾಲಮೃತ್ಯುವಿನ ದೆಸೆಯಿಂದೆ, ಮಾಂ—ಎನ್ನನ್ನು, ಮುಕ್ಷೀಯ—ತೊಲಗಿಸಿ, ಋತಾತ್—ರಕ್ಷಿಸಲಿ.) ಎಂದು ಹೇೞಿತಾಗ್ಗಿ; ಮತ್ತಂ

"ತ್ರಿದೇವಾನಾಂ ತ್ರಿವೇದಾನಾಂ ಬ್ರಹ್ಮಕ್ಷತ್ರವಿಶಾಮಪಿ । ಉಮಾಹ್ಯಂಬಾ ಮಹಾದೇವೋಹ್ಯಂಬಕೋಥ ಸ್ತ್ರಿಯಂಬಕಃ ॥" (ತ್ರಿದೇವಾನಾಂ—ತ್ರಿಮೂರ್ತಿಗಳಿಗೆಯುಂ, ತ್ರಿವೇದಾನಾಂ—ಮೂಱು ವೇದಂಗಳಿಗೆಯುಂ, ಬ್ರಹ್ಮಕ್ಷತ್ರವಿಶಾಮಪಿ—ಬ್ರಾಹ್ಮಣಕ್ಷತ್ರಿಯವೈಶ್ಯರೇ ಮುಖ್ಯರಾದ ಮೂಱುಜಾತಿಗಳಿಗೆಯುಂ, ಉಮಾ—ಪಾರ್ವತೀದೇವಿಯು, ಅಂಬಾ—ತಾಯಿ, ಮಹಾದೇವಃ—ಪರಮೇಶ್ವರನು, ಅಂಬಕಃ—ತಂದೆಯು.

ಅತಃ-ಅದುಕಾರಣದಿಂದೆ, ತ್ರಿಯಂಬಕಃ—ತ್ರಿಯಂಬಕನು.) ಇಂತೆಂದಾದಿತ್ಯಪುರಾಣಂ ಪೇಳಿರ್ದ್ದುದಾಗಿ;

ಕಾಲಮೃತ್ಯುವಂ ಗೆಲ್ದಾತಂಗೆ ಜನನವಿಲ್ಲಾಗ್ಗಿ ಜನನಮರಣರಹಿತನೇ ಬ್ರಹ್ಮವೆಂದು ನಿಶ್ಚೈಸಲ್ಪಟ್ಟತ್ತಾಗಿ;

"ನಾರಾಯಣಪರಂಬ್ರಹ್ಮ" ಎಂಬಿವು ಮೊದಲಾದ ವೇದವಾಕ್ಯಂಗಳಿಗೆ "ಯೋವೈ ರುದ್ರಃ ಸ ಭಗವಾರ್ನ್ ಯಶ್ಚ ವಿಷ್ಣುಃ" ಎಂಬ ಅಥರ್ವಶಿಖಾವಾಕ್ಯದಿಂದೆ ಆವನಾನೊರ್ವ ರುದ್ರನೆ ವಿಷ್ಣುವೆಂದು ಕೊಂಡಾಡಿಸಿಕೊಳ್ಳಲ್ಪಟ್ಟುದಱಿಂ ತದಂತರ್ಯಾಮಿತ್ವಮನಾದೊಡಂ, ನಾರಾಯಣನತ್ತಣಿಂದೆ ಎಂದು ಪಂಚಮ್ಯಾಂತವಾಗಿಯಾದೊಡಂ ನಿರ್ಣೈಸಲ್ಪಟ್ಟುದಾಗಿ;

"ಪರಾತ್ಪರತರೋ ಬ್ರಹ್ಮಾ ಪರಾತ್ಪರತರೋಹರಿಃ । ಪರಾತ್ಪರತರೋ ಈಶಃ ತನ್ಮೇ ಮನಃ ಶಿವಸಂಕಲ್ಪಮಸ್ತು॥" (ಪರಾತ್—ಪರವಾದ ದೇವತೆಗಳತ್ತಣಿಂದೆ, ಬ್ರಹ್ಮಾ—ಬ್ರಹ್ಮನು, ಪರತರಃ—ಶ್ರೇಷ್ಠನು, ಪರಾತ್—ಪರವಾದ ಬ್ರಹ್ಮನತ್ತಣಿಂದೆ, ಹರಿಃ—ವಿಷ್ಣುವು, ಪರತರಃ-ಶ್ರೇಷ್ಠನು, ತತ್ಪರಾತ್ಪರಃ—ಪರಕ್ಕೆ ಪರವಾದ ಬ್ರಹ್ಮವಿಷ್ಣುಗಳತ್ತಣಿಂದೆ, ಈಶಃ—ಸರ್ವೈಶ್ವರ್ಯಸಂಪನ್ನನಾದ ಈಶ್ವರನು ಅತ್ಯಂತ ಶ್ರೇಷ್ಠನು. ತತ್—ಅಂತಪ್ಪ ಪರಬ್ರಹ್ಮವನ್ನು, ಮೇ—ಎನ್ನ, ಮನಃ—ಮನಸ್ಸು, ಶಿವಸಂಕಲ್ಪಮಸ್ತು—ಶಿವನೆಂಬ ನೆನಹನುಳ್ಳದಾಗಲಿ.) ಇಂತೆಂದು ಶಿವನು ನಾರಾಯಣನತ್ತಣಿಂ ಪರಕ್ಕೆ ಪರವಾದ ಬ್ರಹ್ಮವೆಂದು ಶಿವಸಂಕಲ್ಪೋಪನಿಷತ್ತಿನಲ್ಲಿ ನಿರ್ಣೈಸಲ್ಪಟ್ಟತ್ತಾಗಿ;

"ನಾರಾಯಣ ಪರಂ ಬ್ರಹ್ಮ" ಎಂಬ ಶ್ರುತಿಗೆ ನಾರಾಯಣನತ್ತಣಿಂದೆ "ಅತ್ಯತಿಷ್ಠದ್ದಶಾಂಗುಲ"ನಾದ ಶಿವನೇ ಬ್ರಹ್ಮಂ. ಎಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ. ॥೪॥

ಪದ ॥ ಕೆಲವು ಶ್ರುತಿಸ್ಮೃತಿಪುರಾಣಂಗಳು ।
ಜಲಜನಾಭನನೆ ಪೊಗಳ್ವುವೆಂದೆನುತಿಹೆನು ।
ಛಲರೆ ಶಂಕರನ ಶಕ್ತ್ಯಂಶವಾಗಿಹ ವಿಷ್ಣು ।



ನಲವಿಂದೆ ಶಿವನಾಮಂಗಳನಾಂತಿಹ ।
ನೊಲಿದದಱಿಂದುಪಚಾರವಾಕ್ಯಂಗಳಿಂ ।
ಮಲಹರನನೆ ಹೃದಯದೊಳಿಂಬಿಟ್ಟು ತಾ ।
ನುಲಿವುವಾವಿಷ್ಣುರ್ವಿಗಭಿಮುಖಮೆಂಬಂತೆ ।
ಗೆಲವಾಂತು ಪಂಚಭಿರ್ಗೀಯತೇ ವಿಷ್ಣುಃ ।
ಸಲೆ ದಶಭಿರ್ಗೀಯತೇ ಶಿವ ಎನುತಲು ।
ಜ್ವಲವಾಗಿ ಶಂಕರಸಂಹಿತೆಯುಸಿರ್ವುದು ।
ಚಲವೇಕೆ ರೂಢಿರ್ಯೌಗಿಕಮಪಹರತಿ ಯೆಂ ।
ದಲಘುತರದ ನ್ಯಾಯವಿರಲು ಮನದೊಳು ಸಂ ।
ಚಲಮನುಚಿತವೇದಶಾಸ್ತ್ರಪುರಾಣಾನಿ ।
ಬಲುಹಾಂತು ಭಾರತಾದೀನಿ ಸತ್ತಮಸವಂ ।
ಜುಲಶಿವಮೇವ ಸದಾಸಾಂಬಮೆನುತೆ ನಿ ।
ಶ್ಚಲದಿ ಹೃದಿಕೃತ್ವಾ ಬ್ರುವಂತಿಹ ಯೆಂದು ।
ಹಲವು ಪುರಾಣಂಗಳವು ಮೊಱೆಯುತ್ತಿವೆ ।
ಖಿಲಮನೊಂದುವುದದೇಕೀಶ್ವರವಾದದಿಂ ।
ದಿಳೆಯು ವ್ಯವಸ್ಥೆಯುಂತದುಕಾರಣದಿ ತುದಿ ।
ಯುಲಿ ನಷ್ಟವ್ಯಂ ಬಹುನಾಯುಕಮೆನೆ ಪರ ।
ಕಲಿಸಿದ ಏಕಮೇವಾದ್ವಿತೀಯಂ ಬ್ರಹ್ಮ ।
ನಲಿದು ನುತಿಸೆ ಋತಂ ಸತ್ಯಂ ಪರಂ ಬ್ರಹ್ಮ ।
ಬಲುಬುದ್ಧಿಯಿಂ ಮಾಡು ಪುರುಷಂ ಕೃಷ್ಣಪಿಂ ।
ಗಳಮೂರ್ಧ್ವರೇತಂ ವಿರೂಪಾಕ್ಷನೆಂದು ಪೊ ।
ಗಱೆ ತೈತ್ತಿರೀಯೋಪನಿಷದು ಈಶನೆ ಯೆಂದು ।
ನೆಲೆಯನಱಿಯದಿರ್ಪರೆ ಭ್ರಾಮಕರಾಗಿ ।
ಪಲವನೆಣಿಸುತಿಹರೆ ಏಕೋದೇವ ।
ನಳಿನಾಕ್ಷನಿಂದೆ ಬೇಱೆಯುಂಟೆಂಬನು ।
ಮಲಬದ್ಧನವನು ಸಾರೆ ಶಂಕರಪಾದ ।
ನಳಿನವ ಭಜಿಸೆ ಮೋಕ್ಷವ ಸಾರದಿಹರೆ ॥೫॥

ಕೆಲವು ಶ್ರುತಿಸ್ಮೃತಿಪುರಾಣಂಗಳು ವಿಷ್ಣುವಂ ಪೇಳ್ವುವೆಂದು ನುಡಿವುದು ಭ್ರಾಮಕಬುದ್ಧಿಯೆಂಬುದೀವಚನದ ತಾತ್ಪರ್ಯಾರ್ಥಂ. ಅ ದೆಂತೆನೆ:—

ವಿಷ್ಣುವು ಶಿವಶಕ್ತ್ಯಂಶವಾದುದಱಿಂ ಶಿವನಾಮಂಗಳನೇ ತನ್ನ ನಿಜನಾಮಂಗಳಾಗಿ ತಾಳ್ದಿಹಂ; ಅದಱಿಂ ವಿಷ್ಣುವಿಗಭಿಮುಖವೆಂಬಂತೆ ಭ್ರಾಮಕವಾಗಿ ತೋರ್ಪುವು. "ಪಂಚಭಿರ್ಗೀಯತೇ ವಿಷ್ಣುರ್ದಶಭಿರ್ಗೀಯತೇ ಶಿವಃ" (ಪಂಚಭಿಃ–ಐದುವಾಕ್ಯಂಗಳಿಂದೆ, ವಿಷ್ಣುಃ–ನಾರಾಯಣನು, ಗೀಯತೇ–ಹೇಱಿಸಿಕೊಳ್ಳಲ್ಪಡುತ್ತಿರ್ದಪನು. ದಶಭಿಃ–ಹತ್ತುವಾಕ್ಯಂಗಳಿಂದೆ, ಶಿವಃ–ಶಿವನು, ಗೀಯತೇ–ಸ್ತೋತ್ರಮಾಡಿಸಿಕೊಳ್ಳಲ್ಪಡುತ್ತಿರ್ದಪನು.) ಇಂತೆಂದು ಶಂಕರಸಂಹಿತಾವಾಕ್ಯಮುಂಟಾಗಿ "ರೂಢಿರ್ಯೌಗಿಕಮಪಹರತಿ" ಎಂಬ ನ್ಯಾಯಮುಂಟಾಗಿ ರೂಢಿಯು ಸಾಕ್ಷಿ ಅಲ್ಪಸಾಕ್ಷಿಯನಪಹರಿಸುವುದಾದಕಾರಣದಿಂ ಮತ್ತೆ ಕೆಲವು ಭೂಷಣಾರ್ಥಂಗಳುಂ; ಮತ್ತಂ "ನಾಮಾನಿ ತವ ಗೋವಿಂದ ಯಾನಿ ಲೋಕೇ ಮಹಾಂತಿಚ । ತಾನ್ಯೇವ ಮಮ ನಾಮಾನಿ ಸತ್ಯಮೇವ ನ ಸಂಶಯಃ॥" (ಗೋವಿಂದ-ಎಲೈ ವಿಷ್ಣುವೇ, ತವ–ನಿನ್ನ, ಮಹಾಂತಿಚ–ಬಹುಳವಾದ, ಯಾನಿ–ಅವುವು ಕೆಲವು, ನಾಮಾನಿ–ಹೆಸರುಗಳು, ಲೋಕೇ–ಲೋಕದಲ್ಲಿ, ಸಂತಿ–ಉಂಟು, ತಾನ್ಯೇವ–ಆ ನಾಮಧೇಯಂಗಳೇ, ಮಮ–ಎನ್ನ, ನಾಮಾನಿ–ಹೆಸರುಗಳು, ಸತ್ಯಮೇವ–ಯಥಾರ್ಥನೆ, ನಸಂಶಯಃ–ಸಂದೇಹವಿಲ್ಲ.) ಹೀಗೆಂದು ವಿಷ್ಣುವಿನೊಡನೆ ಶಿವನಾಡಿದ ವಾಕ್ಯಮುಂಟಾಗಿ; "ನಾರಾಯಣಶ್ಚ ಗೋವಿಂದೋ ಅಚ್ಯುತಃ ಕೃಷ್ಣ ಏವ ಚ" ಎಂದು ವಿಷ್ಣು ಮೊದಲಾದ ಶಬ್ದಂಗಳೆಲ್ಲಮುಂ ಶಿವನಾಮಮಾದುದಱಿಂದೆಯುಂ; ಮತ್ತಂ "ವೇದಶಾಸ್ತ್ರಪುರಾಣಾನಿ ಭಾರತಾದೀನಿ ಸತ್ತಮ । ಶಿವಮೇವಸದಾಸಾಂಬಂ ಹೃದಿಕೃತ್ವಾಬ್ರುವಂತಿಹಿ" (ವೇದ–ನಾಲ್ಕುವೇದ, ಶಾಸ್ತ್ರ–ಆಱುಶಾಸ್ತ್ರ, ಪುರಾಣಾನಿ–ಹದಿನೆಂಟು ಪುರಾಣಗಳು, ಭಾರತಾದೀನಿ–ಭಾರತ ರಾಮಾಯಣ ಮೊದಲಾದ ಇತಿಹಾಸಂಗಳು, ಸಾಂಬಂ–ಪಾರ್ವತೀಸಮೇತನಾದ, ಶಿವಮೇವ–ಪರಮೇಶ್ವರನನೇ, ಹೃದಿಕೃತ್ವಾ–ಹೃದಯದಲ್ಲಿ ಅಂಗೀಕರಿಸಿಕೊಂಡು, ಬ್ರುವಂತಿಹಿ–ನುಡಿಯುತ್ತಿಹುವು) ಇಂತೆಂಬ ಸ್ಕಾಂದೋಕ್ತಿಯುಂಟಾಗಿಯುಂ; "ಸರ್ವೇವೇದಾ ಯತ್ಪದಮಾಮನಂತಿ" (ಸರ್ವೇವೇದಾಃ–ಸಮಸ್ತ ವೇದಂಗಳು, ಯತ್–ಆವನಾನೊರ್ವ ಪರಮೇಶ್ವರನ, ಪದಂ–ಮಾಯಾ

ತೀತಪದವಿಯನ್ನು, ಆಮನಂತಿ—ಪೇಟಿುತ್ತಿಹುವು.) ಇಂತೆಂದು ಸಮಸ್ತ ವೇದಂಗಳೆಲ್ಲಮುಂ ಪರಮೇಶ್ವರನ ಪದವಿಯನೆ ಪೇೞ್ವುವೆಂಬುದಱಿಂದೆಯುಂ; "ನಷ್ಟವ್ಯಂ ಬಹುನಾಯಕಂ" ಎಂಬ ನ್ಯಾಯಮುಂಟಾಗಿ ಬಹುನಾಯಕರಾದೊಡೆ ಜಗತ್ತಿನವಸ್ಥೆ ನಷ್ಟಕ್ಕೆ ಕಾರಣಮಪ್ಪುದಱಿಂದೆಯುಂ; "ಏಕಮೇವಾದ್ವಿತೀಯಂ ಬ್ರಹ್ಮ" ಎಂದು ವೇದಂಗಳೊಳೆರಡಿಲ್ಲದ ಬ್ರಹ್ಮವೊಂದೆ ಎಂದು ನಿರ್ಣೈಸಲ್ಪಟ್ಟುದಱಿಂದೆಯುಂ; ಬ್ರಹ್ಮಮಾವುದೋ ಎಂದು ಸಂದೇಹಮಾದಪ್ಪುದೆಂದು "ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ । ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮೋ ನಮಃ" ಎಂದು ವೇದಪುರುಷನು ಸತ್ಯೋಕ್ತಿಯಿಂದೆ "ಕೃಷ್ಣಪಿಂಗಳಂ" ಎಂದು ಉಮಾರ್ಧವಿಗ್ರಹತ್ವಂ, "ಊರ್ಧ್ವರೇತಂ" ಎಂದು ಊರ್ಧ್ವರೇತಸ್ಸು, "ವಿರೂಪಾಕ್ಷಂ" ಎಂದು ತ್ರಿಲೋಚನತ್ವಮಾವಾತಂಗುಂಟು, ಅಂತಹ ಸಾಂಬ ಸದಾಶಿವನೇ ಬ್ರಹ್ಮವೆಂದು ನಿಶ್ಚೈಸಿರುವದಱಿಂದೆಯುಂ ಸಮಸ್ತ ವೇದಶಾಸ್ತ್ರಪುರಾಣಂಗಳಿಗೆಯುಂ ಶಿವನೊರ್ವನೇ ಕರ್ತೃ ಎಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ. ॥೫॥

ಪದ ॥ ತರಣಿಯುಗ್ನಿಗಳಿಗೊಂದೊಂದು ಪುರಾಣಂಗ ।
ಳೂರೆವುವು ಬೊಮ್ಮನವರ್ಗಿಮ್ಮಡಿ ಪೆರ್ಚಾ ।
ಗಿರಲವಗೆರಡು ಪುರಾಣಗಳುಸಿರ್ವುವು ।
ಹರಿ ವಿಧಿಗಿಂದೆರಟ್ಮಡಿ ಹೆಚ್ಚಾಗ ।
ಲಿರದವನನು ನಾಲ್ಕು ಪುರಾಣಂಗಳು ।
ಭರದೆ ಪೊಗೞ್ವುವು ತಾರತಮ್ಯಪ್ರೀತಿ ।
ಕರಮೊಗಿಯುಗಣಿತವೇದಪುರಾಣಂಗ ।
ಳುರಗಭೂಷಣನ ನುತಿಪುವು ಸತ್ಯೋಕ್ತಿಯಿಂ ।
ಧರೆ ಚಂದ್ರಾದ್ಯಷ್ಟಮೂರ್ತಿಗಳ ।
ವರಧಿಕಾರದಿರವನಱಿದು ಸೂಕ್ಷ್ಮನುತಿಗಳಿಂ ನುತಿಪುವು ।
ಪರಮೇಶ್ವರನ ನುತಿಯೊಂದಱಿ ಸರ್ವಮುಂ ।
ವರ ಕ್ರಮಾಜ್ಞೆಬ್ಬಾದಿರೂಪೇಣ ದೇವತಾಃ ।
ಸಂಕೀರ್ತಿತಾಸ್ಸರ್ವಾಸ್ಯೇತಾನಿ ಮೊ ।

D

ದುರು ವಿಪ್ರೇಂದಾಃ ಶಿವ ಏವ ನ ಸಂಶಯಃ ।
ಇರದಿಂತೆಂದುದು ಯಜ್ಞವೈಭವಖಂಡ ।
ದಿರರೆ ತದರ್ಥದೊಳು ಶ್ರುತಿಗಳನೇಕವಾ ।
ಗಿರುತಿಹುವದಱಿಂದರ್ಥವಶಿರಸ್ಸದು ।
ತ್ತರವಾಗಿ ಏಕ ಏವ ಹಿ ರುದ್ರೋ ಹಿ ಎನು ।
ತೊರೆಯುತೆ ತಾಂ ಕಡೆಯಲ್ಲಿ ಸರ್ವಮನ್ಯ ।
ತ್ಪರಿತ್ಯಜೇತೆಂದು ಸಮಾಪ್ತಿಯನ್ಯೆದಿತ ।
ದಱ ಬಱವಿಡಿದು ತ್ರಿಮೂರ್ತಿಜನಕನು ಶಂ ।
ಕರನೆಂದು ಪಿಂದೆ ಪೇೞ್ದುದಾ ಮಾಂಡೂಕ್ಯದೊಳ್ ।
ಪರಿಕಿಸು ಲೈಂಗ್ಯದೊಳ್ ತ್ರೈಮೂರ್ತಿನಾಂ ಚ ಪಿ ।
ತರಂ ತ್ರಿಶಕ್ತೀನಾಂ ಸದಾಶಿವಂ ಎಂದುದು ।
ಪರಮಕಾರುಣಿಕನೇ ಸರ್ವಜನಕನೆಂದು ।
ಮೊರೆವ ವೇದಂಗಳನು ಕಾಣುತೆ ಬಿಟ್ಟು ।
ಹರಿಯನೆ ದೈವವನು ಮಾಡಿಕೆ ನಿನ್ನ ।
ದುರಿತಕ್ಕೆ ಕಡೆಗಳನು ಕಾಣೆನು ವೈಷ್ಣ ।
ವರು ಕೆಟ್ಟ ಕೇಡು ತಾನಿಂತೆಂಬುದನು ॥೬॥

ಸೂರ‍್ಯಾಗ್ನಿಗಳಿಗೊಂದೊಂದು ಪುರಾಣಂ, ಬ್ರಹ್ಮಂಗೆರಡು, ಹರಿಗೆ ನಾಲ್ಕು ಪುರಾಣಂಗಳವರವರಧಿಕಾರಮನಱಿದು ಲೌಕಿಕಱಿಂದವರ್ಗೆ ಉಪಾಸನಾರ್ಥಮಾಗಿ ತದಂತರ್ಯಾಮಿಪರವಾಗಿ ಪೇೞ್ವುವು.

ಈಯರ್ಥದಲ್ಲಿ ಸ್ಕಾಂದದೊಳ್ ಸೂತಸಂಹಿತೆಯಲ್ಲಿ— ಶಿವಮಾಹಾತ್ಮ್ಯಖಂಡದಷ್ಟಮಾಧ್ಯಾಯದೊಳು

"ಪುರಾಣೈರ್ದಶಭಿರ್ವಿಪ್ರಾಃ ಪ್ರೋಕ್ತೋ ರುದ್ರಸ್ತಥೈವಚ । ಚತುರ್ಭಿರ್ಭಗವಾನ್ವಿಷ್ಣುಃ ದ್ವಾಭ್ಯಾಂ ಬ್ರಹ್ಮಾ ಪ್ರಕೀರ್ತಿತಃ ॥ ಅಗ್ನಿರೇಕೇನ ವಿಪ್ರೇಂದ್ರಾಃ ತಥೈಕೇನ ದಿವಾಕರಃ । ಏವಂ ಮೂರ್ತ್ಯಭಿಧಾನೇನ ದ್ವಾರೇಣೈವ ಮುನೀಶ್ವರಾಃ ॥ ಪ್ರವಕ್ತವ್ಯೋ ಮಹಾದೇವಃ ಸ್ಥಿತಸ್ಸರ್ವಾಸು ಮೂರ್ತಿಷು ॥" (ವಿಪ್ರಾಃ—ಎಲೈ ನೈಮಿಶಾರಣ್ಯವಾಸಿಗಳಾದ ಋಷಿಗಳಿರಾ, ದಶಭಿಃ—ಶೈವ ಸ್ಕಾಂದ ಲೈಂಗ್ಯ ಕೂರ್ಮ ವಾಮನ ವರಾಹ ಮತ್ಸ್ಯ ಮಾರ್ಕಂಡೇಯ ಬ್ರಹ್ಮಾಂಡ ಭವಿಷ್ಯತ್ತೆನಿಪ, ಪುರಾಣೈಃ—ಹತ್ತು ಪುರಾಣಂಗಳಿಂದೆ, ರುದ್ರಃ—ಪರಮೇಶ್ವ

ರನು, ಪ್ರೋಕ್ತಃ—ಹೇಳಲ್ಪಟ್ಟನು. ತಥೈವಚ—ಹಾಂಗೆಯೇ, ಭಗವಾನ್—ಷಡ್ಗುಣೈಶ್ವರ್ಯಸಂಪನ್ನನಹ, ವಿಷ್ಣುಃ—ನಾರಾಯಣನು, ಚತುರ್ಭಿಃ—ನಾರದೀಯಂ, ಭಾಗವತಂ, ಗಾರುಡಂ, ವೈಷ್ಣವವೆಂಬ, ನಾಲ್ಕಱಿಂದೆ ಹೇಳಲ್ಪಟ್ಟನು. ಬ್ರಹ್ಮಾ—ಬ್ರಹ್ಮನು, ದ್ವಾಭ್ಯಾಂ—ಬ್ರಾಹ್ಮ, ಪಾದ್ಮ ಎಂಬೆರಡಱಿಂದೆ, ಪ್ರಕೀರ್ತಿತಃ—ಕೊಂಡಾಡಿಸಿಕೊಳಲ್ಪಟ್ಟನು. ಹೇ ವಿಪ್ರೇಂದ್ರಾಃ—ಎಲೈ ವಿಪ್ರಶ್ರೇಷ್ಠರಿರಾ, ಏಕೇನ—ಆಗ್ನೇಯವೆಂಬೊಂದಱಿಂದೆ, ಅಗ್ನಿಃ—ಅಗ್ನಿಯು, ಪ್ರೋಕ್ತಃ—ಹೇಳಲ್ಪಟ್ಟನು. ಹಾಂಗೆಯೇ, ಏಕೇನ—ಬ್ರಹ್ಮಕೈವರ್ತವೆಂಬೊಂದಱಿಂದವೆ, ದಿವಾಕರಃ—ಸೂರ್ಯನು, ಪ್ರೋಕ್ತಃ—ಹೇಳಲ್ಪಟ್ಟನು. ಹೇ ಮುನೀಶ್ವರಾಃ—ಎಲೈ ಋಷಿಗಳಿರಾ, ಏವಂ—ಈಪ್ರಕಾರದಿಂದೆ, ಮೂರ್ತ್ಯಭಿಧಾನೇನ—ಮೂರ್ತಿಗಳೆಂಬ ಹೆಸರಿನ, ದ್ವಾರೇಣ—ಮಾರ್ಗದಿಂದೆ, ಮಹಾದೇವಏವ, ಪರಮೇಶ್ವರನೇ, ಪ್ರವಕ್ತವ್ಯಃ—ಹೇಳಿಸಿಕೊಳ್ಳಲ್ಪಟ್ಟನು. ಸ ಏವ—ಆ ಮಹಾದೇವನೇ, ಸರ್ವಾಸು ಮೂರ್ತಿಷು—ವಿಷ್ಣು ಬ್ರಹ್ಮಾದಿಸಮಸ್ತಮೂರ್ತಿಗಳಲ್ಲಿಯುಂ, ಸ್ಥಿತಃ—ಇರುತಕ್ಕಾತನು. ತದಂತರ್ಯಾಮಿಪರತ್ವದಿಂದೆ ಈಶ್ವರನನೇ ಪೇಳ್ದುದೆಂಬುದರ್ಥ.)

ಹಾಗೆಯೇ, ಯಜ್ಞವೈಭವಖಂಡದಲ್ಲಿ—

"ಕ್ರಮಾಚ್ಛಬ್ದಾದಿರೂಪೇಣ ದೇವತಾಃ ಪರಿಕೀರ್ತಿತಾಃ । ಸರ್ವಾಣ್ಯೇತಾನಿ ವಿಪ್ರೇಂದ್ರಾಃ ಶಿವಏವ ನ ಸಂಶಯಃ॥" (ಕ್ರಮಾತ್—ತಱುವಾಯದತ್ತಣಿಂದೆ, ಶಬ್ದಾದಿರೂಪೇಣ—ಶಬ್ದ ಸ್ಪರ್ಶ ರೂಪ ರಸ ಗಂಧಂಗಳಿಗೆ ಅಧಿದೇವತೆಗಳಾದ ಸದಾಶಿವ, ಈಶ್ವರ, ರುದ್ರ, ವಿಷ್ಣು, ಬ್ರಹ್ಮರೆಂಬ ಅಭಿಧಾನರೂಪಿನಿಂದೆ, ದೇವತಾಃ—ಪಂಚದೇವತೆಗಳು, ಪರಿಕೀರ್ತಿತಾಃ—ಹೇಳಲ್ಪಟ್ಟರು. ಏತಾನಿ ಸರ್ವಾಣಿ—ಈಸಮಸ್ತಮುಂ, ಶಿವ ಏವ—ಶಿವನೊರ್ವನೇ, ನಸಂಶಯಃ—ಸಂದೇಹಮಿಲ್ಲ. ಅವರವರುಗಳಲ್ಲಿಅಂತರ್ಯಾಮಿಯಾಗಿ ಶಿವನೊರ್ವನೆ ಹೇಳಿಸಿಕೊಳಲ್ಪಟ್ಟನೆಂಬುದರ್ಥ.)

ಮಹೋಪನಿಷತ್ತಿನಲ್ಲಿ:—

"ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ" ಎಂದು (ವಿಷ್ಣುವಿನ ಹೃದಯಕಮಲಮಧ್ಯದಲ್ಲಿರ್ಪ ಅಣುರೂಪವಾದ ಅಗ್ನಿಯ

ಧ್ಯದಲ್ಲಿ, ಪರಮಾತ್ಮಾ-ಪರಮಾತ್ಮನಾದ ರುದ್ರನು, ವ್ಯವಸ್ಥಿತಃ—ಇರ್ದ ನು) ಎಂದು ಹೇೞೆ

"ಸಬ್ರಹ್ಮಾ ಸ ಶಿವಸ್ಸಹರಿಃ ಸೇಂದ್ರಃ ಸೋಕ್ಷರಃಪರಮಸ್ಸ್ವರಾಟ್" (ಸಃ—ಆ ಪರಮಾತ್ಮನಾದ "ಶಿವಮದ್ವೈತಂ ಚತುರ್ಥಂ ಮನ್ಯಂತೇ" ಎಂಬ ತ್ರಿಮೂರ್ತಿಗಳತ್ತಣಿಂದೆ ನಾಲ್ಕನೆಯವನಾದ ಪರಶಿವನೇ, ಬ್ರಹ್ಮಾ—ಬ್ರಹ್ಮನು, ಸಃ—ಆತನು, ಶಿವಃ—ಸಂಹಾರರುದ್ರನು, ಸಃ—ಆತನು, ಹರಿಃ—ವಿಷ್ಣುವು, ಸಃ—ಆ ಪರಶಿವನು, ಇಂದ್ರಃ—ದೇವೇಂದ್ರನು, ಸಃ—ಆತನು, ಅಕ್ಷರಃ—ಕೇಡಿಲ್ಲದಾತನು, ಸಃ—ಆತನು, ಪರಮಃ—ಉತ್ಕೃಷ್ಟನಾದ, ಸ್ವರಾಟ್—ತನ್ನಿಂದ ತಾನೇ ಪ್ರಕಾಶಿಸುವಾತನು.) ಇಂತೆಂದುದಾಗಿ ವಿಷ್ಣುಬ್ರಹ್ಮಾದಿಗಳ ಪೇೞ್ವ ವಾಕ್ಯಂಗಳೆಲ್ಲಮುಂ ತದಂತರ್ಯಾಮಿಯಾದ ಶಿವನೇ ಎಂದು ನಿಶ್ಚಯಿಸಲ್ಪಟ್ಟತು. ಅದುಕಾರಣದಿಂ "ಶಿವಏಕೋಧ್ಯೇಯಃ, ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ" ಎಂದಥರ್ವಶಿಖೆ ಶಿವನೊರ್ವನೆ ಧ್ಯಾನಕ್ಕೆ ಯೋಗ್ಯನು, ಉೞಿದ ಸಮಸ್ತವನ್ನು ಬಿಡಲ್ತಕ್ಕುದೆಂದು ಪರಿಸಮಾಪ್ತಿಯನೊಂದಿತಾಗಿ;

ಮತ್ತಂ ಲೈಂಗ್ಯದಲ್ಲಿ:—

"ತ್ರಿಮೂರ್ತೀನಾಂಚಪಿತರಂ ತ್ರಿಶಕ್ತೀನಾಂ ಸದಾಶಿವಂ" (ತ್ರಿಮೂರ್ತೀನಾಂಚ—ಬ್ರಹ್ಮವಿಷ್ಣುರುದ್ರರುಗಳಿಗೆ, ಪಿತರಂ—ತಂದೆಯಾದಾತನು ತ್ರಿಶಕ್ತೀನಾಂ—ಮೂಱು ಶಕ್ತಿಯರ್ಗೆಯುಂ, ಸದಾಶಿವಂ—ಸದಾಶಿವನೇ ತಂದೆಯೆಂಬುದರ್ಥ.) ಇಂತು ಸರ್ವಜನಕನಾದ ಸಾಂಬಸದಾಶಿವನೇ "ನದೀನಾಂ ಸಾಗರೋ ಗತಿಃ" ಎಂದು ಸಮಸ್ತ ಶ್ರುತಿಪುರಾಣೇತಿಹಾಸಂಗಳಿಂದೆ ಆ ಆ ದೇವತೆಗಳಲ್ಲಿ ಅಂತರ್ಯಾಮಿಯಾಗಿ ಕೊಂಡಾಡಿಸಿಕೊಳಲ್ಪಟ್ಟನೆಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ. ||೬||

ಪದ || ಕೇಶವನೆ ಸತ್ವಗುಣದ ಪ್ರಧಾನನು ವು |
ಮೇಶ ತಮೋಗುಣವಾತ ಸಂಹಾರವು |
ನೋಸರಿಸದೆ ಮಾಡಿ ಸಕಲಮಂ ನೋಯಿಪ |
ನಾಶಿವತರಮಾಗಿ ಪೇೞ್ವ ಪುರಾಣಂಗ |
ಳಾಶೈವಾದಿಗಳು ತಮೋಗುಣಮದಱಿಂದೆ |
ಭಾಸುರಮಲ್ಲು ವರ್ಜ್ಯಂಗಳೆಂದೊಲ್ದೆಯ್ದು |

ಆಸರೋಜಾಸನ ವಿಷ್ಣುರುದ್ರರ ಪೆತ್ತ ।
ನಾಸದಾಶಿವನದಱಿಂದೆ ಗುಣಾತೀತ ।
ನಾಶಿವಮದ್ವೈತಂ ಚತುರ್ಥ ಮೆಂದೆನ ।
ಲಾಃಶ್ರುತಿಯುಗಣಿತ ತ್ರೈಮೂರ್ತಿಗಳ ಪಡೆ ।
ದೀಶನಂಡಾಂತರಂಗಳೊಳಿಂಬಿಟ್ಟಿಹ ।
ನಾಸರ್ವಮಂ ತನ್ನ ಲೀಲೆಗೋಸುಗ ಜನ್ಮ ।
ದಾಸರಿಂ ನೊಂದು ಬೞಲ್ವ ಜನರ್ಗೆ ಮ ।
ಹೇಶನತ್ಯಂತದಯುದೆ ಸ ಷುಪ್ತಿತ್ವ ಪ್ರ ।
ಕಾಶಮಾಂತಿಹ ಪ್ರಳಯಮನ್ಯೆದಿಸುತ ಸಂ ।
ತೋಷಮನೊಂದಿಪ ನಡುವೆಯುನಿಂದಿತ ।
ವಾಸುದೇವನು ಮನಃಕ್ಲೇಶದಿಂದ ಸುರರ ।
ಗಾಸಿಬಡಿಪನಲ್ಲದೆ ಯೋನಿಜನಾಗು ।
ತಾಸತಿಯಂ ನೀಗಿ ಬಹುದುಃಖವನೊಂದುತೆ ।
ನಾಶತ್ವಮಾಂತನವನೇ ತಮೋಗುಣದವ ।
ನಾಸಂಬಂಧಪುರಾಣಂಗಳೆ ನಿರಯಕ್ಕೆ ।
ವಾಸಮಾಗಿಹುವು ಶಂಕರನ ನಿಂದಿಪುದಱಿಂದೆ ।
ಮೋಸವೇತಕೆ ದಶ ಶೈವಪುರಾಣಾನಿ ।
ಯಾಸಾತ್ವಿಕಾನಿ ವಿದುರ್ಬುಧಾ ಎಂದೆನ ।
ಲೀಶಾನಸ್ಸರ್ವವಿದ್ಯಾನಾಮೆಂದು ಗಿ ।
ರೀಶನವಿದ್ಯಾಗುರು ಮೋಕ್ಷವೆನಿಪಾ ।
ಆಸರ್ವವೇದಂಗಳಿಗೆ ತಮೋಗುಣವ ನಿ ।
ವಾಸಿಸಲದು ಪಾಪ ಹೇಷ್ಯಮಪ್ಪುದು ಪುಸಿ ।
ಯಾಶಂಕೆಮಾಬ್ಬುದನು ಬಿಡಿನ್ನು ನಂ ।
ದೀಶಾದಿಶಾಪವನು ಹರಿಸಲು ಸ ।
ರ್ವೇಶನು ಕೇಳೋ ನೀನು ವೈಷ್ಣವರು ಕೀ ।
ನಾಶನನ ಗಿರಿಯನು ಸಾರ್ದರು ಜಗ ।
ದೀಶನನಱಿಯದಂತದ ನೋಡಲಾತೆಱನು ॥೭॥

ವಿಷ್ಣುವಂ ಸತ್ವಗುಣದವನೆಂದು ಶಂಭುವಂ ತಮೋಗುಣದವನೆಂದು ಅವೈದಿಕವಾದಿಗಳಾಡುವರ್. ಅದು ಶ್ರುತಿವಿರುದ್ಧಮಾದುದಱಿಂ ಭವಕ್ಕೆ ಹೇಷ್ಯವೆಂದಱಿವುದು.

ಉತ್ತರತಾಪನೀಯದಲ್ಲಿ ಮೊದಲು ಅಕಾರ ಉಕಾರ ಮಕಾರಂ ಗಳ್ಗೆ ಅಧಿದೇವತೆಗಳಾದ ಬ್ರಹ್ಮ ವಿಷ್ಣು ರುದ್ರರಂ ಪೇಳ್ದು, ತದನಂತ ರದಲ್ಲಿ "ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸವಿಜ್ಞೇ ಯಃ" (ಅದ್ವೈತಂ–ಎರಡಿಲ್ಲದಿರ್ದಂತಹ, ಶಿವಂ–ಶಿವನನ್ನು, ಚತು ರ್ಥಂ–ಗುಣಮೂರ್ತಿಗಳಾದ ಮೂರ್ತಿಗಳತ್ತಣಿಂದೆ ನಾಲ್ಕನೆಯವನೆಂ ದು, ಮನ್ಯಂತೇ–ತಿಳಿಯುತ್ತಿಹರು, ಸಃ–ಆ ಪರಮೇಶ್ವರನು, ಆತ್ಮಾ– ಪರಮಾತ್ಮನು, ಸಃ–ಆತುರೀಯಶಿವನು, ವಿಜ್ಞೇಯಃ–ಸತ್ವರಜಸ್ತ ಮೋಗುಣಗಳತ್ತಣಿಂದೆ ಮೀಱಿದವನೆಂದು ಅಱಿಯಲ್ತಕ್ಕವನು.)

ಮತ್ತಂ ಅಥರ್ವಶಿಖೆಯಲ್ಲಿ:— "ಧ್ಯಾಯೀತೇಶಾನಂ ಪ್ರಧ್ಯಾಯಿ ತವ್ಯಂ" ಎಂದು ವಿಶೇಷವಾಗಿ ಧ್ಯಾನಕ್ಕೆ ಯೋಗ್ಯವಾದಾತನು ಪರಮೇ ಶ್ವರನೆಂದು ಹೇಳಿ, ತದನಂತರದಲ್ಲಿ ಮತ್ತೆ ಕೆಲವು ವಿಷ್ಣು ಮೊದಲಾ ದವರ್ಗೆ ಸತ್ವಗುಣಮಾದುದಱಿಂ ಸರ್ವರಿಂ ಶಿವಂ ಎಂತು ಧ್ಯಾನಿಸಲು ಯೋಗ್ಯನೆಂಬ ಶಂಕೆ ಪುಟ್ಟುತ್ತಿರಲಾಗಿ ತದನಂತರದಲ್ಲಿ "ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ ಸರ್ವಾಣಿ ಚೇಂದ್ರಿ ಯಾಣಿ ಸಹ ಭೂತೈಃ" ಎಂಬೊಡೆ ಬ್ರಹ್ಮವಿಷ್ಣು ರುದ್ರ ದೇವೇಂದ್ರ ರನ್ನೂ ಸಮಸ್ತ ಇಂದ್ರಿಯಂಗಳನ್ನೂ ಸಹಿತವಾಗಿ ಪಂಚಮಹಾಭೂ ತಂಗಳನು ಪಡೆದನು, ಎಂದು ಪಂಚಮಹಾಭೂತಂಗಳೊಡನೆ ಬ್ರಹ್ಮ ವಿ ಷ್ಣು ರುದ್ರೇಂದ್ರರುಗಳನ್ನು ಸಮಾನಪ್ರತಿಪತ್ತಿಯಿಂದೆ ಪೇಳಿ, ಕತದಿಂ ಮೋಕ್ಷೇಚ್ಛೆಯುಳ್ಳವರಿಂದೆ ಧ್ಯಾನಕ್ಕರ್ಹರಲ್ಲವೆಂದುಂ, ಧ್ಯಾನಕ್ಕೆ ಕಾ ರಣನಾದಾತನು ಆರು ಎಂದು ಶಂಕೆ ಪುಟ್ಟುತ್ತಿರಲಾಗಿ ಅಷ್ಟರಮೇಲೆ "ಕಾರಣಂತು ಧ್ಯೇಯಃ" (ಕಾರಣಂ–ತ್ರಿಮೂರ್ತಿಗಳ ಜನನಕ್ಕೆ ಕಾರ ಣನಾಗಿರ್ದಾತನು, ತು–ವಿಶೇಷವಾಗಿ, ಧ್ಯೇಯಃ–ಸರ್ವರಿಂದಲೂ ಧ್ಯಾ ನಿಸಿಕೊಂಬುವುದಕ್ಕೆ ಯೋಗ್ಯನು.) ಇಂತೆಂದು ಅನಂತರದಲ್ಲಿ ಅಂತಪ್ಪ ದೇವನಾವನೆಂದು ಶಂಕೆ ಪುಟ್ಟುತ್ತಿರಲು, "ಸರ್ವೈಶ್ವರ್ಯಸಂಪನ್ನ ಸ್ಸ ರ್ವೇಶ್ವರಃ ಶಂಭುರಾಕಾಶಮಧ್ಯೇ ಧ್ರುವಂ" (ಸರ್ವೈಶ್ವರ್ಯಸಂ ಪನ್ನಃ–ಷಡ್ಗುಣೈಶ್ವರ್ಯಸಂಪನ್ನನಾದ, ಸರ್ವೇಶ್ವರಃ–ಸಮಸ್ತಕ್ಕೂ ಒಡೆಯನಾದ, ಶಂಭುಃ– "ಶಂಭುರೀಶಃಪಶುಪತಿಃ" ಎಂದು ನಿಘಂಟುಪ್ರ

ಸಿದ್ಧನಾಗಿ ಶಂಭುಶಬ್ದವಾಚ್ಯನಾದ ಪರಮೇಶ್ವರನೇ, ಆಕಾಶಮಧ್ಯೇ- ಧ್ಯಾನಿಸುವವರ ಹೃದಾಕಾಶಮಧ್ಯದಲ್ಲಿ, ಧ್ರುವಂ-ನಿತ್ಯವಾಗಿರ್ಪಾತನು.) ಎಂಬ ತ್ರಿಮೂರ್ತಿಗಳೀತನಿಂ ಪುಟ್ಟಿದರಾಗಿ ಸತ್ವರಜಸ್ತಮೋಗುಣಾತೀ ತನೆಂಬುದಂ ಈ ಅಥರ್ವಶಿಖೆಯಲ್ಲಿಯೇ ಸ್ಪಷ್ಟವಾಗಿ ಪೇಳ್ದುದ ಱಿಂ "ಶ್ರುತಿವಿರೋಧೇ ಪುರಾಣಾನಾಂ ದುರ್ಬಲತ್ವಾತ್" ಶ್ರುತಿಯೊಡನೆ ವಿರೋಧವಾದ ಪುರಾಣವಾಕ್ಯಂಗಳ್ಗೆ ಬಲವಿಲ್ಲವಾದಕಾರಣಂ ಅವಂ ನಂಬಲಾಗದು. "ಗುಣಾಸ್ಸತ್ವಂರಜಸ್ತಮಃ" ಎಂಬ ಶ್ಲೋಕಾನುಸಾ ರವಾಗಿ ಮೂಱುಂ ಗುಣಂಗಳುಂ ಮಾಯಾಧೀನವಾದುದಱಿಂದೆ ಅಂತಪ್ಪ ಸತ್ವಗುಣಯುಕ್ತನಪ್ಪ ವಿಷ್ಣುವಿಂಗೆಯುಂ ಪ್ರಾಕೃತತ್ವಮಪ್ಪುದಱಿಂ ಗುಣಾತೀತನಾದ ಸಾಂಬಸದಾಶಿವಂಗೆ ತಮೋಗುಣಮಿಲ್ಲವೆಂದಱಿವುದು.

ಮತ್ತಂ ಕೈವಲ್ಯೋಪನಿಷತ್ತಿನಲ್ಲಿ:— "ಹೃತ್ಪುಂಡರೀಕಂ ವಿರ ಜಂವಿಶುದ್ಧಂ" ಎಂಬುದಾದಿಯಾಗಿಯುಪಕ್ರಮಿಸಿ "ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ । ಧ್ಯಾ ತ್ವಾಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃಪರಸ್ತಾತ್" (ಉಮಾಸಹಾಯಂ-ಪಾರ್ವತೀಸಮೇತನಾದ, ಪರಮೇಶ್ವರಂ-ಉತ್ಕೃ ಷ್ಟವಾದ ಐಶ್ವರ್ಯವನುಳ್ಳ, ಪ್ರಭುಂ-ಒಡೆಯನಾದಂಥ, ತ್ರಿಲೋಚನಂ- ಮೂಱು ನೇತ್ರಂಗಳನುಳ್ಳಂಥ, ನೀಲಕಂಠಂ-ಕಪ್ಪುಕೊರಲನುಳ್ಳಂಥ, ಪ್ರ ಶಾಂತಂ-ವಿಶೇಷವಾಗಿ ತೊಳಗುವಂಥ, ಭೂತಯೋನಿಂ-ಸಮಸ್ತಪ್ರಾ ಣಿಗಳ್ಗೆಯುಂ ಪಂಚಮಹಾಭೂತಾದಿಗಳ್ಗೆಯುಂ ಕಾರಣನಾದ, ಸಮ ಸ್ತಸಾಕ್ಷಿಂ-ವಿಶ್ವಕ್ಕೆ ಸಾಕ್ಷಿಭೂತನಾದಂಥ, ತಮಸಃ-ತಮಸ್ಸಿನ, ಪರ ಸ್ತಾತ್-ಪರದಲ್ಲಿರ್ದಾತನಾದ, ತಮೇವಂ-ಆ ಉಮಾಸಹಾಯನಾದ ಪರ ಮೇಶ್ವರನನ್ನು, ಮುನಿಃ-ಮುನೀಶ್ವರನು, ಧ್ಯಾತ್ವಾ-ಧ್ಯಾನಮಾಡಿ, ಗಚ್ಛತಿ-ಮೋಕ್ಷವನೆಯ್ದುವನು) ಎಂದು ತಮಸ್ಸಿನತ್ತಣಿಂದೆ ಪರನಾ ದಾತನು ಶಿವನು ಎಂದು ಪೇಳುತ್ತಾಗಿ;

ಮತ್ತಂ "ವೇದಾಹಮೇತಂ ಪುರುಷಂ ಮಹಾಂತಂ ಆದಿತ್ಯವರ್ಣಂ ತಮಸಃ ಪರಸ್ತಾತ್ । ತಸ್ಯಯೋನಿಂ ಪರಿಪಶ್ಯಂತಿಧೀರಾಃ ತನ್ಮೇಮನಶ್ಶಿ ವಸಂಕಲ್ಪಮಸ್ತು" ಎಂದು ಶಿವಸಂಕಲ್ಪೋಪನಿಷತ್ತಿನಲ್ಲಿ ಪೇಳ್ದುದಾಗಿ;

ಮತ್ತಂ "ಸಂಸಾರೇಖಿನ್ನಾನಾಂ ಪ್ರಾಣಿನಾಂ ಪ್ರಭುಃ ಕೃಪಯಾ। ಕುರುತೇ ಮಹಾರ್ಥಸಂಹೃತಿಮೆತೇಷಾಮೇವ ವಿಶ್ರಾಂತ್ಯೈ॥" (ಸಂಸಾರೇ—ಭವವೆಂಬ ಸಂಸಾರದಲ್ಲಿ, ಖಿನ್ನಾನಾಂ—ಬಳಲಿದಂತಹ, ಪ್ರಾಣಿನಾಂ—ಸಚರಾಚರಪ್ರಾಣಿಗಳ್ಗೆ, ಪ್ರಭುಃ—ಒಡೆಯನಾದಂತಹ ಪರಮೇಶ್ವರನು, ಕೃಪಯಾ—ಕರುಣದಿಂವೆ, ಏತೇಷಾಮೇವ—ಈಪ್ರಾಣಿಗಳ, ವಿಶ್ರಾಂತ್ಯೈ—ವಿಶ್ರಮಿಸುವುದಕ್ಕೋಸ್ಕರ, ಮಹಾರ್ಥಸಂಹೃತಿಂ—ಸರ್ವಸಂಹಾರವನ್ನು, ಕುರುತೇ—ಮಾಡುತ್ತಿಹನು.) ಇಂತೆಂಬ ಪುರಾಣವಾಕ್ಯಂಗಳುಂಟಾಗಿ ಸಂಹಾರಂಮಾಳ್ಪುದು ತಮೋಗುಣಮಲ್ತು, ಸಂಹಾರರುದ್ರನು ಅನೇಕರುದ್ರರ ಮಧ್ಯದಲ್ಲಿ ಈತನೊರ್ವ ರುದ್ರನಾದ ಕಾರಣಂ "ಸಹಸ್ರಾಣಿ ಸಹಸ್ರಶೋ ಯೇರುದ್ರಾಅಧಿಭೂಮ್ಯಾಂ । ತೇಷಾಂ ಸಹಸ್ರಯೋಜನೇವ ಧನ್ವಾನಿ ತನ್ಮಸಿ" ಎಂದು ಯಜುರ್ವೇದದ ಶ್ರೀರುದ್ರಸೂಕ್ತದಲ್ಲಿ ಒರ್ಬೊರ್ಬ ರುದ್ರನು ಅನೇಕ ಸಹಸ್ರರೂಪುಗಳನಾಂತು ಭೂಮಿಗೆ ಅಧಿಪತಿಗಳಾಗಿಹರು, ಅವರುಗಳಿಗೋಸ್ಕರ ನಮಸ್ಕಾರವು ಎಂಬುದಾಗಿ; ಇವರೆಲ್ಲರಂ ತನ್ನ ಲೀಲೆಗೋಸುಗ ಮನಸ್ಸಂಕಲ್ಪದಿಂ ಸೃಜಿಸಿ ಸತ್ವರಜಸ್ತಮೋಗುಣಂಗಳನವರಧೀನವಂ ಮಾಡಿ ಜಗದ್ವ್ಯಾಪಾರಮಂ ನೋಡಿ ನಲಿವ ಸಾಂಬಸದಾಶಿವಂಗೆ ಆವ ಗುಣವ್ಯೂ ಇಲ್ಲವೆಂದು ನಿಶ್ಚೈಯಿಸಲ್ತಕ್ಕುದು.

ಮತ್ತಂ ಶಾಂಕರಸಂಹಿತೆಯಲ್ಲಿ:— "ದಶಶೈವಪುರಾಣಾನಿ ಸಾತ್ವಿಕಾನಿ ವಿದುರ್ಬುಧಾಃ । ವೈಷ್ಣವಾನಿ ಚಚತ್ವಾರಿ ತಾಮಸಾನಿ ಮುನೀಶ್ವರಾಃ ॥" (ಎಲೈ ಮುನೀಶ್ವರರುಗಳಿರಾ ಶಿವಪುರಾಣಂಗಳ್ ಪತ್ತುಂ ಸಾತ್ವಿಕಪುರಾಣಂಗಳ್ ಮತ್ತಂ ವಿಷ್ಣುಸಂಬಂಧಿಯಾದ ಭಾಗವತಾದಿ ನಾಲ್ಕುಂ ಪುರಾಣಂಗಳ್ ತಾಮಸಪುರಾಣಂಗಳ್.) "ತಾಮಸಾನಿರಯಃಪ್ರದಾಃ" ಎಂಬುದರಿಂ ತಾಮಸಪುರಾಣಂಗಳ್ ವರ್ಜ್ಯಂಗಳ್; ಶಿವಪುರಾಣಂ ತಾಮಸಂಗಳೆಂದು ಗ್ರಂಥಂಗಳುಳ್ಳೊಡೆ ಮೊದಲ್ ಪೇಳ್ದ ಶ್ರುತಿಗಳ್ಗೆ ವಿರುದ್ಧಮಪ್ಪುದರಿಂ "ವೇದಾಃಪ್ರಮಾಣಮಿತಿ ಸಂಗಿರಮಾಣಏವ" ಎಂಬ ವಾಕ್ಯಕ್ಕೆ ವಿರೋಧಮಿಲ್ಲದುದೆ ವೈದಿಕಶ್ರುತಿಗಳ್, ಅವರ್ಗೆ ತಮೋಗುಣಮಂ ಕಲ್ಪಿಸಿ ನಿರಯಕ್ಕೆ ಬೀಳ್ವುದೇ ಅವೈದಿಕಮಾದುದು.

"ಈಶಾನ ಸ್ಸರ್ವವಿದ್ಯಾನಾಂ" ಎಂಬ ಶ್ರುತಿಯೊಳ್ ಸಮಸ್ತವಿದ್ಯೆಂಗಳ್ಗೆಯುಂ ಶಿವನೇ ಆದಿಕರ್ತೃವಾದುದಱಿಂ ಸರ್ವಮುಂ ಶಿವಮಯಮೆಂಬುದೀಸೂತ್ರದ ಬಹುಶಬ್ದನಿರ್ವಚನಾರ್ಥಂ. ॥೭॥

ಪದ ॥ ಹರಿ ವಿಶ್ವವ್ಯಾಪಕ ವಿಶ್ವಂ ನಾರಾಯಣಂ ।
ಹರಿಯೆಂದುದಾಶ್ರುತಿಯೆಂದಾಡುತಿರ್ಪೆಯ್ಯೆ ಶಾಂ ।
ಕರಿಯಂಶವಾದುದಱಿಂ ವಿಶ್ವರೂಪನು ।
ಹರನನೆ ವಿಶ್ವಾಧಿಕೋ ರುದ್ರೋ ಮಹರ್ಷಿ ಎಂ ।
ದೊರೆದುದು ಶ್ರುತಿ ವಿಶ್ವರೂಪಾಂತ ದಾವೋ ।
ದರನಿಗೆ ಪತಿರುದ್ರನೆಂದುದಾ ಮಾತದಂ ।
ತಿರಲಿ ಶಂಕರನೆ ವಿಶ್ವವ್ಯಾಪಿಯೆಂದು ।
ವಿರಚಿಸುತಿವೆ ಸರ್ವೋ ವೈ ರುದ್ರಸ್ತಸ್ಮೈ ।
ಪರಮರುದ್ರಾಯ ನಮೋ ಅಸ್ತು ಎಂದು ತೈ ।
ತ್ತಿರದೊಳು ಯೋ ರುದ್ರೋ ಅಗ್ನೌ ಯೋ ಅಪ್ಸು ।
ಇರದೆ ರುದ್ರೋ ವಿಶ್ವಾಭುವನಾವಿವೇಶ ಎಂ ।
ದರರೆ ಛಾಂದೋಗ್ಯದೊಳ್ ಪೇಳ್ದುದು ಮತ್ತೆ ಕೇಳ್ ।
ಭರದೆ ಯಜುರ್ವೇದದ ಶ್ರೀರುದ್ರದೊ ।
ಳೆರಡನೆಯನುವಾಕ ಮೊದಲಾಗಿ ಎಂಟರ ।
ಪರಿಯಂತ ಶಿವನ ವಿಶ್ವವ್ಯಾಪಕತ್ವಮಂ ।
ಪರುಠವಿಸಿದುದು ಜಗತ್ಸಿದ್ಧಮಲ್ತೆ ಶಂ ।
ಕರನ ಸರ್ವೋಹ್ಯೇಷ ರುದ್ರ ಎಂದುದು ಶ್ರುತಿ ।
ತರಣಿಮಂಡಲಗತನೆ ವ್ಯಾಪಕನದಂ ।
ತಿರಲಿ ಕೇಳಾದಿತ್ಯಮಂಡಲಾಂತರ್ವರ್ತಿ ।
ಪುರುಷಸ್ಸರ್ವಾಂತರ್ಯಾಮಿಯೆನಲಾಮಾಯಾ ।
ತರದಿ ಯ ಏಷೋಂತರಾದಿತ್ಯೇ ಹಿರಣ್ಮಯಃ ।
ಪುರುಷೋದೃಶ್ಯತೇ ಎಂದುದು ಶ್ರುತಿ ನೀನು ।
ಪರಿಕಿಸದದನು ವಿಷ್ಣುವೇ ಹಿರಣ್ಮಯನೆನು ।
ತೊರೆವುದದೇಂ ನಮೋ ಹಿರಣ್ಯಬಾಹವೇ ।
ಸರಸೋಕ್ತಿಯಿಂದೆ ಹಿರಣ್ಯಪತಯೇ ಯೆಂದು ।
ವರತೈತ್ತಿರೀಯೋಕ್ತಿ ಸ್ವರ್ಣರೂಪ ಭಾ ।
ಸುರದೇಹನೀಶನೆಂದುದು ಅಸೌಯಸ್ತಾಮ್ರೋ ।

ಅರುಣ ಎಂಬುದು ಮೊದಲಾಗಿ ಶ್ರೀರುದ್ರದೊ ।
ಳಿರದ ಸೌಯೋವಸರ್ಪತಿ ನೀಲಗ್ರೀವೋ ಎಂ ।
ದೊರೆದುದು ನೀಲಕಂಠನೆ ಸೂರ್ಯಮಂಡಲಾಂ ।
ತರಗತನೆಂದು ಕೂಡೆ ಹಿರಣ್ಮಯು ।
ಪುರುಷನು ಶಂಭು ನೋಡೆ ನೀಲಗ್ರೀವೋ ।
ಹರನೆಂದು ಶ್ರುತಿಗಳಾಡೆ ಅರುಣಸರ ।
ಸಿರುಹಾಕ್ಷನೆಂದು ಪಾಡೆ ಮರೆದು ಬಿಡು ।
ದುರಿತಕಿಲ್ಬಿಷರು ವೈಷ್ಣವರು ನೋಡೆ ॥೮॥

"ವಿಶ್ವಂ ನಾರಾಯಣಂ ದೇವಂ" ಎಂದು, (ವಿಶ್ವಂ—ವಿಶ್ವವೆಲ್ಲಂ, ನಾರಾಯಣಂದೇವಂ—ನಾರಾಯಣಸ್ವರೂಪಂ) ಎಂಬ ಶ್ರುತಿ ಪೇಳ್ದುದು ಯಥಾರ್ಥವು. "ಆಪೋವಾ ಇದಂ ಸರ್ವಂ" ಎಂಬ ಶ್ರುತಿಯುಂಟಾಗಿ (ಇದಂಸರ್ವಂ—ಈ ಸಮಸ್ತವೂ, ಆಪೋವಾ—ಉದಕಮಯವೇ) ಎಂಬು ದಱಿಂ "ಅಪಾಮೇಕಾಮಹಿಮಾನಂ ಬಿಭರ್ತಿ" ಎಂಬ ದೇವೀಸೂಕ್ತಿ ಯುಂಟಾಗಿ ಆವುದಕವೇ ವಿಷ್ಣುಮಯವಾದ ಕಾರಣ ಅಂಥಾ ಉದಕ ದಲ್ಲಿ ಶಿವನು ತನ್ನ ವೀರ್ಯಮಂ ಬಿಟ್ಟನಾಗಿ ಆವುದಕವೇ ಶಿವಶಕ್ತಿಯಾ ದುದಱಿಂ, ವಿಷ್ಣುವು ಸರ್ವವ್ಯಾಪಕನೆಂದು ನಿಶ್ಚಯಿಸಲ್ಪಡ್ಡುದು.

ಶ್ವೇತಾಶ್ವತರೋಪನಿಷತ್ತು ನಾರಾಯಣೋಪನಿಷತ್ತು ಮೊದಲಾ ದುವಱಲ್ಲಿ:—

"ವಿಶ್ವಾಧಿಕೋ ರುದ್ರೋ ಮಹರ್ಷಿಃ" (ವಿಶ್ವ—ಅಂತಪ್ಪವಿಷ್ಣು ಮಯವಾದ ವಿಶ್ವಕ್ಕೆ, ಮಹರ್ಷಿಃ—ಋಷಿಗಳ್ಗೆ ಒಡೆಯನಾದ ರುದ್ರ ನು ಅಧಿಕಃ—ಒಡೆಯನು.) ಎಂಬುದಱಿಂ ವಿಷ್ಣುವಿಂಗೆ ಕರ್ತೃ ಈಶ್ವ ರನೆಂದೇ ನಿಶ್ಚಯಿಸಲ್ಪಟ್ಟತು.

"ಯಚ್ಚಕಿಂಚಿ ಜ್ಜಗತ್ಸರ್ವಂ ದೃಶ್ಯತೇಶ್ರೂಯತೇಪಿವಾ । ಅಂತ ರ್ಬಹಿಶ್ಚತತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ" (ಯತ್—ಆವುದಾ ನೊಂದು, ಜಗತ್—ಜಗತ್ತು, ಕಿಂಚಿತ್—ಒಂದಿಷ್ಟು, ದೃಶ್ಯತೇ—ಕಾಣ ಲ್ಪಡುತ್ತಿಹುದು. ಶ್ರೂಯತೇ—ಕೇಳಲ್ಪಡುತ್ತಿಹುದು, ತತ್ಸರ್ವಂ— ಆ ಸಮಸ್ತ ಜಗತೂ, ಅಂತಃ—ಒಳಗೆ, ಬಹಿಶ್ಚ—ಹೊರಗೆ, ನಾರಾ

ಯಣಃ—ನಾರಾಯಣನು, ವ್ಯಾಪ್ಯ—ವ್ಯಾಪಿಸಿ, ಸ್ಥಿತಃ—ಇರ್ಪನು.) ಇಂತೆಂಬ ನಾರಾಯಣೋಪನಿಷತ್ತನ್ನು ಅಂಗೀಕರಿಸಿ ಜೈಮಿನಿ ಪೇಳಿರ್ದಪಂ:— "ಹರಂ ಹರಿನಿಯಂತಾರಂ ಪರಂತಮಹಮಾನತಃ । ಯದಾಜ್ಞಯಾ ಜಗತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ ॥" (ಹರಿನಿಯಂತಾರಂ—ವಿಷ್ಣುವಿಗೆ ಪ್ರೇರಕನಾಗಿರ್ದಂಥ, ಹರಂ—ಪರಮೇಶ್ವರನನು, ಪರಂ—ಉತ್ಕೃಷ್ಟವಾಗಿ, ಅಹಂ—ನಾನು, ಆನತಃ—ನಮಸ್ಕರಿಸುವಾತನು. ಯತ್—ಆವನಾನೊರ್ಬ ಪರಮೇಶ್ವರನ, ಆಜ್ಞಯಾ—ಆಜ್ಞೆಯಿಂದೆ, ಜಗತ್ಸರ್ವಂ—ಸಮಸ್ತ ಜಗತ್ತನ್ನು ನಾರಾಯಣಃ—ಕೃಷ್ಣನು, ವ್ಯಾಪ್ಯ—ವ್ಯಾಪಿಸಿ, ಸ್ಥಿತಃ—ಇರ್ಪನು, ತಂ-ಅಂತಪ್ಪ ಪರಮೇಶ್ವರನನ್ನು, ವಂದೇ—ನಮಸ್ಕರಿಪೆನು) ಎಂದು ವೇದಪಾದಸ್ತವನದಲ್ಲಿ ಪೇಳ್ದನಾಗಿ;

"ವೇದಾರ್ಥೋ ಯಃ ಸ್ವಯಂ ಜ್ಞಾತ ಸ್ತತ್ರಾಜ್ಞಾನಂ ಭವೇದಪಿ । ಋಷಿಭಿರ್ನಿಶ್ಚಿತೇತ್ವರ್ಥೇ ಕಾ ಶಂಕಾ ಸ್ಯಾನ್ಮಹಾತ್ಮನಾಂ ॥" ಎಂದು ವ್ಯಾಸವಾಕ್ಯಮುಂಟಾಗಿ, (ಯಃ—ಆವುದಾನೊಂದು, ವೇದಾರ್ಥಃ—ವೇದದ ಅರ್ಥವು, ಸ್ವಯಂ—ತಾನೆ, ಜ್ಞಾತಃ—ಅಱಿಯಲ್ಪಡುವುದೋ, ತತ್ರ—ಅಲ್ಲಿ, ಅಜ್ಞಾನು ಭವೇದಪಿ—ಅಜ್ಞಾನವು ಪುಟ್ಟಲಾಗಿ, ಋಷಿಭಿಃ—ಋಷಿಗಳಿಂದೆ, ನಿಶ್ಚಿತೇ—ನಿಶ್ಚಯಿಸಲ್ಪಟ್ಟ, ಅರ್ಥೇ—ಅರ್ಥದಲ್ಲಿ, ಮಹಾತ್ಮನಾಂ—ಬಲ್ಲಂಥವರ್ಗೆ, ಕಾ ಶಂಕಾ ಸ್ಯಾತ್—ಆವ ಶಂಕೆಯಾದೀತು,— ಆವ ಶಂಕೆಯೂ ಇಲ್ಲವೆಂದರ್ಥ. ಮತ್ತಂ

"ಸರ್ವೋ ವೈ ರುದ್ರಸ್ತಸ್ಮೈ ರುದ್ರಾಯ ನಮೋ ಅಸ್ತು ॥" (ಸರ್ವೋವೈ—ಸಮಸ್ತ ವಿಶ್ವವೂ, ರುದ್ರಃ—ರುದ್ರಮಯವು, ತಸ್ಮೈ ರುದ್ರಾಯ—ಅಂತಪ್ಪ ರುದ್ರನಿಗೋಸ್ಕರ, ನಮೋ ಅಸ್ತು—ನಮಸ್ಕಾರವಾಗಲಿ) ಯೆಂದು ತೈತ್ತಿರೀಯೋಪನಿಷತ್ತು ಪೇಳ್ದುದಾಗಿ;

ಮತ್ತಂ "ಯೋ ರುದ್ರೋ ಅಗ್ನೌ ಯೋ ಅಪ್ಸು ಯ ಓಷಧೀಷು ಯೋ ರುದ್ರೋ ವಿಶ್ವಾಭುವನಾವಿವೇಶ ತಸ್ಮೈ ರುದ್ರಾಯ ನಮೋ ಅಸ್ತು" ಎಂದು ಆವನಾನೊರ್ವ ರುದ್ರನು ಅಗ್ನಿಯಲ್ಲಿ, ಉದಕದಲ್ಲಿ,

ಓಷಧಿಯಲ್ಲಿ, ಸಮಸ್ತ ಭುವನಂಗಳಲ್ಲಿ ವ್ಯಾಪಿಸಿಕೊಂಡಿರ್ಪನೊ ಅಂತ ಹನಿಗೋಸುಗ ನಮಸ್ಕಾರವೆಂದು ಛಾಂದೋಗ್ಯೋಪನಿಷತ್ತು ಪೇಳ್ದುದಾಗಿ;

ಮತ್ತಂ ಶ್ರೀ ರುದ್ರದ ಎರಡನೆಯ ಅನುವಾಕವೊದಲಾಗಿ ಎಂಟನೆಯ ಅನುವಾಕಪರ್ಯಂತರವು—"ನಮೋ ಹಿರಣ್ಯಬಾಹವೇ ಸೇನಾನ್ಯೇ ದಿಶಾಂಚ ಪತಯೇ ನಮೋ" ಎಂಬುದು ಮೊದಲಾಗಿ "ನಮ ಹಿರಿಣ್ಯಾಯಚ ಪ್ರಪಥ್ಯಾಯಚ ನಮಃ ಕಿಂಶಿಲಾಯಚ ಕ್ಷಯಣಾಯಚ ನಮಃ ಕಪರ್ದಿನೇ ನಚ ಪುಲಸ್ತಯೇಚ ನಮೋ ಗೋಷ್ಠ್ಯಾಯಚ ಗೃಹ್ಯಾಯಚ ನಮೋ ವಾಸ್ತವ್ಯಾಯಚ" ಎಂಬುವೇ ಕಡೆಯಾಗಿ ಶಿವನ ವಿಶ್ವವ್ಯಾಪಕತ್ವಮಂ, "ತತ್ರಭವಃ" ಬಂಬ ಪಾಣಿನಿಯ ಸೂತ್ರದಿಂದೆ "ಗೋಷ್ಠ್ಯಾಯಚ ಗೃಹ್ಯಾಯಚ" ಎಂಬ ವಾಕ್ಯಂಗಳ್ಗೆ ವಿಶ್ವಾಂತರ್ಯಾಮಿತ್ವಮಂ ಪೇಳ್ದುದಾಗಿ; ಶಿವನೇ ವಿಶ್ವವ್ಯಾಪಕನು, ವಿಶ್ವಾಂತರ್ಯಾಮಿಯೆಂದು ನಿಶ್ಚೈಸಲ್ತಕ್ಕುದು.

ಮತ್ತಂ "ಆದಿತ್ಯಮಂಡಲಾಂತರ್ವರ್ತೀ ಪುರುಷಸ್ಸೋಂತರ್ಯಾಮೀ" ಎಂದು ಶ್ರುತಿಯುಂಟಾಗಿ, ಸೂರ್ಯಮಂಡಲಮಧ್ಯಸ್ಥನಾದ ದೇವನೇ ಸರ್ವಾಂತರ್ಯಾಮಿಯೆಂದುದಾಗಿ; ಅಂತಪ್ಪ ದೇವನಾವನೆಂದೊಡೆ "ಯ ಏಷೋಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ" ಎಂದು ಶ್ರುತಿಯುಂಟಾಗಿ, (ಏಷಃ—ಈ, ಅಂತರಾದಿತ್ಯೇ—ಸೂರ್ಯಮಂಡಲಾಂತರದಲ್ಲಿ, ಯಃ—ಆವನಾನೊರ್ವ, ಹಿರಣ್ಮಯಃ ಪುರುಷಃ—ಸುವರ್ಣಮಯನಾದ ಪುರುಷನು, ದೃಶ್ಯತೇ—ಕಾಣಲ್ಪಡುತ್ತಲಿಹನು.) ಎಂದುದಾಗಿ; ಅಂತಪ್ಪ ದೇವನು ವಿಷ್ಣುವೋ ಈಶ್ವರನೋ ಎಂದು ಭ್ರಮೆ ಪುಟ್ಟುತ್ತಿರಲ್ "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ ಹಿರಣ್ಯ ರೂಪಾಯ ಹಿರಣ್ಯಪತಯೇ ಅಂಬಿಕಾಪತಯೇನಮಃ" (ಹಿರಣ್ಯಬಾಹವೇ—ಸುವರ್ಣಮಯವಾದ ತೋಳುಗಳನುಳ್ಳ, ಹಿರಣ್ಯವರ್ಣಾಯ—ಸುವರ್ಣದೋಪಾದಿವರ್ಣವನುಳ್ಳ, ಹಿರಣ್ಯರೂಪಾಯ—ಸುವರ್ಣರೂಪವನುಳ್ಳ, ಹಿರಣ್ಯಪತಯೇ—ಸುವರ್ಣಕ್ಕೆ ಪತಿಯಾದ, ಅಂಬಿಕಾಪತಯೇ—ಪಾರ್ವತಿಗೆ ಪತಿಯಾದಂತಹ ನಿನಗೋಸುಗ, ನಮಃ—ನಮಸ್ಕಾರವು)

ಎಂದು ತೈತ್ತಿರೀಯೋಪನಿಷತ್ತು 'ಅಂಬಿಕಾಪತಯೇ' ಎಂದು ಶಿವನನೇ ಪೇಳಿದ್ದುದಾಗಿ;

ಮತ್ತಂ ಕೃಚ್ಛ್ರಾದಿತ್ಯೋಪಸ್ಥಾನಮಂತ್ರದಲ್ಲಿ "ನಮೋ ರುದ್ರಾಯ ಮಹತೇ ದೇವಾಯ ತ್ರ್ಯಂಬಕಾಯೈ ಕಜರಾಧಿಪತಯೇ ಹರಯೇ ಶರ್ವಾಯೇಶಾನಾಯೋಗ್ರಾಯ ನಮೋ ವಜ್ರಿಣೇ ಘೃಣಿನೇ ಕಪರ್ದಿನೇ ನಮಸ್ಸೂರ್ಯಾಯಾದಿತ್ಯಾಯ ನಮೋ ನೀಲಗ್ರೀವಾಯ ಶಿತಿಕಂಠಾಯ ನಮಶ್ಚಂದ್ರಲಲಾಟಾಯ ಕೃತ್ತಿವಾಸಸೇ ನಮೋನಮಃ" ಎಂದುದಾಗಿ;* "ಹರಯೇ" ಎಂಬೆಡೆಯೊಳ್ "ಹರಿ" ಶಬ್ದಪ್ರಯೋಗದಿಂ ವಿಷ್ಣುವಾಚಕಮಲ್ತು ವಿಷ್ಣುವಿಗೆ ನೀಲಕಂಠತ್ವ, ಚಂದ್ರಲಲಾಟತ್ವ, ಕೃತ್ತಿವಾಸಸ್ತ್ವ, ರುದ್ರನಾಮತ್ವಮಿಲ್ಲವಾಗಿ ಹರಿಯೆಂದೊಡೆ ಕರ್ಮಹರನಾದ ಶಿವನೆಂದು ನಿಶ್ಚಯಿಸಲ್ಪಕ್ಕುದು. ಸೂರ್ಯಾಯಾದಿತ್ಯಾಯ ಎಂಬಿವಿರುಕ್ತಿಯೇತಕ್ಕೆಂದೊಡೆ ಸೂರ್ಯರೂಪಾದ ಆತಂಗೋಸುಗ ಆದಿತ್ಯಾಯ ಎಂದುದಱಿಂ ತದಂತರ್ಯಾಮಿಯಾಪಾತನೆಂದು ಪೇಳಲ್ಪಕ್ಕುದು. ನೀಲಗ್ರೀವಾಯಎಂಬುದಱಿಂ ಸೂರ್ಯಮಂಡಲಮಧ್ಯಸ್ಥನು ನೀಲಗ್ರೀವನೆಂದು ಕೆಲವು ಶ್ರುತಿಗಳು ಪೇಳುತ್ತಿಹುವು.)

ಮತ್ತಂ ಯಜುರ್ವೇದದ ಶ್ರೀರುದ್ರಸೂಕ್ತಪ್ರಥಮಾನುವಾಕದಲ್ಲಿ—"ಅಸೌ ಯಸ್ತಾಮ್ರೋ ಅರುಣ ಉತಬಭ್ರುಸ್ಸುಮಂಗಲಃ ಯೇಚೇಮಾಂ ರುದ್ರಾ ಅಭಿತೋ ದಿಕ್ಷು ಶ್ರಿತಾಃ ಸಹಸ್ರಶೋವೈಷಾಂ ಹೇಡಯೀಮಹೇ" (ಯಃ—ಆವನಾನೊರ್ವ, ಅಸೌ—ಸೂರ್ಯನು, ತಾಮ್ರಃ—ತಾಮ್ರವರ್ಣವನುಳ್ಳವನು, ಅರುಣಃ—ಕೆಂಪುವರ್ಣವನುಳ್ಳವನು, ಉತ—ಮತ್ತೆ, ಬಭ್ರುಃ—ಕಪಿಲಪಿಂಗಳವರ್ಣವನುಳ್ಳವನು, ಸು—ಲೇಸಾಗಿ, ಮಂಗಲಃ—ಮಾಂಗಲ್ಯಸ್ವರೂಪನು, ಇಮಾಂ—ಈ ಸೂರ್ಯನನ್ನು, ಯೇಚ—ಆರು ಕೆಲಂಬರು, ಸಹಸ್ರಶಃ—ಸಾಸಿರಪ್ರಕಾರಂಗಳಾಗಿ, ರುದ್ರಾಃ—ರುದ್ರರು, ಅಭಿತೋದಿಕ್ಷು—ಎಲ್ಲ ದಿಕ್ಕುಗಳಲ್ಲಿ, ಶ್ರಿತಾಃ—ಬಳಸಿಕೊಂಡಿಹರು, ಏಷಾಂ—ಅಂತಪ್ಪ ರುದ್ರರನು, ಹೇಡಯೀಮಹೇ—ಸ್ತೋ

* ಅರ್ಥಂ ಕಾಣಬರ್ಪುದಾಗಿ ಬರೆವುದಿಲ್ಲ

ತ್ರವ ಮಾಡಿಹೆನು.) ಎಂದು ವೇದಪುರುಷನು ಸೂರ್ಯನ ವರ್ಣರೂಪಂ ಗಳಂ ಪೇಳ್ದು ಅವನಂ ಬಳಸಿಕೊಂಡಿರ್ಪ ರುದ್ರರಂ ಸ್ತೋತ್ರಂಮಾಡಿ ತದಂತರ್ಯಾಮಿಯಾದ ಮಹಾದೇವನಂ ಮುಂದಣ ಮಂತ್ರದಲ್ಲಿ ಪೇಳುತಿ ರ್ದಪಂ. "ಅಸೌ ಯೋವಸರ್ಪತಿ ನೀಲಗ್ರೀವೋ ವಿಲೋಹಿತಃ ಉತ್ತೈ ನಂ ಗೋಪಾ ಅದೃಶನ್ನದೃಶನ್ನುದಹಾರ್ಯಃ ಉತೈನಂ ವಿಶ್ವಾಭೂ ತಾನಿ ಸದೃಷ್ಟೋ ಮೃಡಯಾತಿ ನಃ" (ಯಃ-ಅವನಾನೊರ್ವಂ, ವಿಲೋ ಹಿತಃ- "ವಿ" ಎಂಬ ಉಪಸರ್ಗದಿಂದೆ ಲೋಹಿತವರ್ಣ ಹಿರಣ್ಯವರ್ಣಂ ಗಳನುಳ್ಳ, ನೀಲಗ್ರೀವಃ-ನೀಲಕಂಧರನಾದ, ಅಸೌ-ಈ ಪರಮೇಶ್ವರ ನು, ಅವಸರ್ಪತಿ-ಸೂರ್ಯಮಂಡಲಮಧ್ಯಸ್ಥನಾಗಿ ದೃಷ್ಟಿಗೋಚರನ ಲ್ಲದೆ ಗಮಿಸುತಿಹನು. ಉತ-ಮತ್ತೆ, ಏನಂ-ಅಂತಪ್ಪ ಈ ಸೂರ್ಯ ನನ್ನು, ಗೋಪಾಃ-ಗೋಪಾಲಕರು, ಉದಹಾರ್ಯಃ-ನೀರ್‌ತರುವಂ ತಹ ಸ್ತ್ರೀಯರು, ಅದೃಶನ್ನದೃಶ್ರ-ಕಾಣುತ್ತಿಹರು. ಸಃ-ಆ ಸೂರ್ಯನು, ದೃಷ್ಟಃ-ಸರ್ವರಿಗೂ ದೃಷ್ಟಿಗೋಚರನಾಗಿರ್ದ ಆ ತನು, ನಃ-ನಮ್ಮನ್ನು, ಮೃಡಯಾತಿ-ರಕ್ಷಿಸಲಿ.) ಇಂತೆಂದು ನೀ ಲಗ್ರೀವನಾದಶಿವನನೆ ಸೂರ್ಯಮಂಡಲಾಂತರ್ಯಾಮಿ ಎಂದು ಪೇ ಳ್ದುದಾಗಿ;

"ಯದಾ ಕೃಷ್ಣೋ ಸ ಪುಂಡರೀಕಮಿವಾಕ್ಷಿಣೀ" ಪುಂಡರೀಕದೋ ಪಾಧಿಯಲ್ಲಿ "ಅಕ್ಷಿಣೀ" ಎಂದು ದ್ವಿವಚನಾಂತಮಾಗಿ ಎರಡು ನೇತ್ರಂ ಗಳನುಳ್ಳವನೆಂದು ಪೇಳ್ದುದಱಿಂ, (ವಿಷ್ಣುಪರಮೆಂದು ಪೇಳ್ವುದು ಉಚಿ ತಮಲ್ತು) ವಿಷ್ಣುವಿಂಗೆ ನೀಲಕಂಧರತ್ವಮಿಲ್ಲದುದಾಗಿ ಮುಗಿದಿರ್ದ ವಹ್ನಿ ನೇತ್ರಮಂ ಪೇಳದೆ ಪುಂಡರೀಕದೋಪಾಧಿಯಲ್ಲಿ ವಿಕಾಸಮನೈದಿರ್ದ ಎರ ಡುನೇತ್ರಂಗಳನೆ ಪೇಳ್ದನೆಂಬುದೀ ಶ್ರುತ್ಯರ್ಥಂ.)

ಅಂತಲ್ಲದೊಡೆ ಪಿಂದೆ ಪೇಳ್ದ ಶ್ರುತಿಗಳ್ಗೆ ವಿರುದ್ಧಮಪ್ಪ ಕತದಿಂ ಸರ್ವವ್ಯಾಪಕನಾಗಿ "ಶತರುದ್ರೀಯೇಣೇತ್ಯೈತಾನಿಹವಾ ಅಮೃತಸ್ಯ ನಾ ಮಧೇಯಾನಿ ಏತೈರ್ಹವಾ ಅಮೃತೋಭವತಿ" ಎಂದು ಲಘುಜಾಬಾಲಿ ಪ್ರಸಿದ್ಧಮಾಗಿ ಅಮೃತಶಬ್ದವಾಚ್ಯನಾದ ರುದ್ರನೇ ಸೂರ್ಯಮಂಡಲಾಂ ತರ್ವರ್ತಿಯೆಂದು, "ಯ ಏಷೋಂತರ್ಯಾಮ್ಯಮೃತಃ" ಎಂದು ಅಮೃ

ತಶಬ್ದವಾಚ್ಯಂಗೆ ಸರ್ವಾಂತರ್ಯಾಮಿಯೆಂದುದಾಗಿ–ಅಂತಪ್ಪ ರುದ್ರನೇ ಸರ್ವಾಂತರ್ಯಾಮಿಯೆಂದು ನಿಶ್ಚೈಸಲ್ಪಟ್ಟನು. ಎಂಬುದೀಸೂತ್ರದ ಬಹುಶಬ್ದನಿರ್ವಚನಾರ್ಥಂ. ‖೮‖

ಪದ ‖ ಗಾಯತ್ರಿ ಸೂರ್ಯಪರವೆಂದು ಪೇಳ್ವುದೆನ ।
ಲಾಯರ್ಥವುಲ್ಲು ತತ್ಸವಿತುರ್ವರೇಣ್ಯವೆಂ ।
ದಾಯತಿಯಿಂ ಭರ್ಗೋದೇವಸ್ಯಧೀಮಹಿ ।
ಧಿಯೋಯೋನಃ ಪ್ರಚೋದಯಾತ್ತೆಂವನೆ ।
ಈಯುಭಯದಲ್ಲಿ ಭರ್ಗಸ್ಸೆಂದು ಸಾಂತವಂ ।
ಮಾಯಾಮೋಹಿತರೆಣಿಸುತ್ತೆ ಶ್ರುತಿಸ್ಮೃತಿ ।
ನ್ಯಾಯವ ನೀಕ್ಷಿಸುವರೆಂತೆನೆ ಕೇಳು ವ್ಯ ।
ತ್ಯಾಯಣೆಯುಂ ಯದೇಷರುದ್ರೋ ಭರ್ಗಾಖ್ಯೋ ।
ಧ್ಯೇಯನೆಂದು ವದಂತಿ ಬ್ರಹ್ಮವಾದಿನ ಎಂದು ।
ದಾಯನ್ವಯಂ ಕೇಳು ದೇವಸ್ಯ ಸವಿತುರ್ಯ ।
ಧ್ಯೇಯೋಭರ್ಗೋನೋಧಿಯಃ ಕ್ರಮಾಶ್ ಪರಿ ।
ಯಾಯದಿಂ ಪ್ರಚೋದಯಾತ್ತಂ ವರೇಣ್ಯವೆಂ ।
ದಾಯುವೇಶನನೆ ಧೀಮಹಿಯೆಂದಕಾರಾಂತ ।
ಪ್ರಾಯದಿಂ ಪ್ರಬಲಸ್ಮೃತ್ಯುಕ್ತಿಗಳುಂಟಾಗಿ ।
ಆಯಾಸವೇಂ ದ್ವಿತೀಯಃ ಪಾದೋ ಭರ್ಗಮ ।
ಯೋಯೆಂದು ತಲವಕಾರೋಪನಿಷತ್ ಪೇಳ್ವ ।
ದಾಯುಮರಂ ಹರಸ್ಸ್ಮರಹರೋಭರ್ಗ ಎಂ ।
ದೋಯಾರದಿಂ ಭರ್ಗನೀಶನೆಂದುದು ಮತ್ತೆ ।
ಗಾಯತ್ರ್ಯುತ್ತರಂ ತತ್ಪರಂ ತತ್ವಮೆಂದೆನುತೊಲ್ವ ।
ಮಾಯಾರಿಸ್ಸಮಹೇಶ್ವರ ಎಂದುವಾದಿತ್ಯ ।
ಕಾಯಜರಿಪು ಶ್ರುತಿಸ್ಮೃತಿಪೌರಾಣಾನಿ ।
ಕಾಯದಿಂ ಭರ್ಗಾಖ್ಯನೈ ವೇದವಾತಾಚ ।
ಗಾಯತ್ರಿಯೆನಲದಱಿಂ ಶಾಸ್ತ್ರಪೌರಾಣಾ ।
ಮ್ನಾಯಂಗಳೀಶನಂ ಪೊಗಳ್ವೆವೆಂದಜ್ಞಿಯದೆ ।
ನಾಯಕನರಕದೊಳ್ ಮುಳುಗಿ ತೇಲುವುದದು ।
ಪ್ರೇಯವೇ ನಿನಗೆ ಕೇಳೊ ಮರ್ವಾದದ ।
ಶ್ರೇಯಸ್ಸದೇನು ಪೇಳೊ ಸರ್ವೇಶನ ।

ಸ್ವಾಯುಕ್ತವೇಕೆ ತಾಳೊ ದುರ್ವಾಕ್ಸಮು ।
ದಾಯವಿನ್ನುಳ್ಳೊಡೊಱೊ ಸಕಲಮಂ ನೀಂ ।
ಜ್ಞೇಯನ ನಿಂದೆಯನೆ ಮಱೆ ಕೂಳ ।೯॥

ಗಾಯತ್ರಿ ಸೂರ್ಯಪರವೆಂದು ಪೇೞ್ವುದು ವೇದಸಮ್ಮತವಲ್ತು. "ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯಧೀಮಹಿ ಧಿಯೋ ಯೋ ನಃ ಪ್ರಚೋದಯಾತ್" ಎಂಬ ಗಾಯತ್ರಿಗೆ ಸ್ಮೃತಿಯಿಾಯರ್ಥ ಮಂ ಪೇೞುತ್ತಿಹುದು. "ಯೋ ದೇವಸ್ಸವಿತಾಸ್ಮಾಕಂ ಧಿಯೋಧರ್ಮಾದಿ ಗೋಚರಾಃ। ಪ್ರೇರಯೇತ್ತಸ್ಯ ಯದ್ಭರ್ಗಃ ತದ್ವರೇಣ್ಯಮುಪಾಸ್ಮಹೇ॥" (ಟೀ- ಧರ್ಮಾದಿಗೋಚರಾಃ-ಸಮಸ್ತ ಲೌಕಿಕ ವೈದಿಕಧರ್ಮಂಗಳ್ಗೆ ಗೋಚರವಾದಂಥ, ಅಸ್ಮಾಕಂ-ನಮ್ಮ, ಧಿಯಃ-ಬುದ್ಧಿಗಳನ್ನು, ಯಃ-ಆವನಾನೊಬ್ಬ, ಸವಿತಾ-ಸೂರ್ಯನೆಂಬ, ದೇವಃ-ದೇವನು, ಪ್ರೇರ ಯೇತ್-ಪ್ರೇರಿಸುತ್ತಿಹನು. ತಸ್ಯ-ಆಸೂರ್ಯನೆಂಬ ದೇವನ, ಯತ್-ಆವುದಾನೊಂದು, ಭರ್ಗಃ-ತೇಜಸ್ಸುಂಟು, ತತ್-ಆ ಭರ್ಗಸ್ಸಿಂಗೆ, ವ ರೇಣ್ಯಂ-ಒಡೆಯನಾಗಿ ಸೂರ್ಯಮಂಡಲಮಧ್ಯಸ್ಥನಾದ ಹಿರಣ್ಮಯಪುರು ಷನಾದ ಮಹಾದೇವನನ್ನು, ಉಪಾಸ್ಮಹೇ-ಉಪಾಸ್ತಿಯಂ ಮಾೞ್ಪೆವು.) "ತದ್ವರೇಣ್ಯಂ" ಎಂಬಲ್ಲಿ ಸೂರ್ಯನಪರವಾಗಿ ಪೇೞೊಡೆ ಸೂರ್ಯಂ ಗೆ ಬುದ್ಧಿಪ್ರೇರಕತ್ವಮಿಲ್ಲದಿರ್ಪುದಱಿಂ "ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾಚತಸ್ಮಾತ್ಪ್ರಸೃತಾಪುರಾಣೀ" ಎಂದು ಶ್ವೇತಾಶ್ವತರದಲ್ಲಿ, (ತತ್-ಆ "ಶಿವಏವಕೇವಲಂ" ಎಂಬ ಏಕೋರುದ್ರನು, ಅಕ್ಷರಂ-ಕೇಡಿಲ್ಲದಂ ತವನು. ತತ್-ಆ ಬ್ರಹ್ಮವು, ಸವಿತುಃ-ಸೂರ್ಯನೆಂಬ ದೇವಂಗೆ, ವರೇಣ್ಯಂ-ಅಂತರ್ಯಾಮಿಯಾಗಿ ಶ್ರೇಷ್ಠವಾದಂಥಾದ್ದು. ತಸ್ಮಾತ್-ಅಂತಪ್ಪ ಮಹಾದೇವನತ್ತಣಿಂದೆ, ಪುರಾಣೀ-ಪೂರ್ವಿಕಳಾದ, ಪ್ರಜ್ಞಾ ಚ-ಬುದ್ಧಿಪ್ರೇರಕಳಾದಂಥ ಆದಿಶಕ್ತಿಯು, ಪ್ರಸೃತಾ-ಹುಟ್ಟಿದಳು.) ಇಂತೆಂದುದಾಗಿ ಬುದ್ಧಿಪ್ರೇರಕತ್ವಕ್ಕೆ ಈಶ್ವರನೇ ಕಾರಣಕರ್ತೃವಾದು ದಱಿಂ "ಸವಿತುರ್ವರೇಣ್ಯಂ" ಎಂಬ ಗಾಯತ್ರೀಮಂತ್ರಕ್ಕೆ ಸೂರ್ಯಂಗೆ ಒಡೆಯನಾಗಿರ್ದಂತಾತನೀಶ್ವರನೆಂದು ಈಶ್ವೇತಾಶ್ವತರದಲ್ಲಿಯೇ ಪೇೞ್ದು ದಾಗಿ ಸಕಾರಾಂತವಾಗಿ ಪೇೞ್ವಲ್ಲಿಯುಂ ಶಿವಪರವೆಂದೇ ಅಱಿವುದು.

ಅಕಾರಾಂತವಾದಲ್ಲಿ— ದೇವಸ್ಯ ಸವಿತುರ್ಮಧ್ಯೇ ಯೋ ಭರ್ಗೋ ನೋ ಧಿಯಃ ಕ್ರಮಾತ್ ಪ್ರಚೋದಯಾತ್ ತಂ ವರೇಣ್ಯಂ ಧೀಮಹಿ ಇತ್ಯನ್ವಯ ಕ್ರಮಃ (ದೇವಸ್ಯ—ದೇವನಾದ, ಸವಿತುಃ—ಸೂರ್ಯನ, ಮಧ್ಯೇ—ಮಧ್ಯದಲ್ಲಿ, ಯಃ—ಅವನಾನೊರ್ವ, ಭರ್ಗಃ—ತೇಜೋಮೂರ್ತಿಯಾದ ಮಹಾದೇವನುಂಟು, ಸಃ—ಆ ದೇವನು, ನಃ—ನಮ್ಮ, ಧಿಯಃ—ಬುದ್ಧಿಗಳನ್ನು, ಪ್ರಚೋದಯಾತ್—ಪ್ರೇರಿಸಲಿ, ವರೇಣ್ಯಂ—ಶ್ರೇಷ್ಠನಾದಂಥ, ತಂ—ಆ ಭರ್ಗಾಖ್ಯನಾದ ಪರಬ್ರಹ್ಮವನ್ನು, ಧೀಮಹಿ—ಓಲೈಸುವೆವು.) "ಹರಸ್ಸ್ಮರಹರೋಭರ್ಗಃ" ಎಂದು ನಿಘಂಟುಪ್ರಸಿದ್ಧವಾಗಿ, ಗಾಯತ್ರೀಮಂತ್ರದಿಂದೆ ಶಿವನೇ ಪೇೞಿಸಿಕೊಳ್ಳಲ್ಪಟ್ಟನಲ್ಲದೆ, ಮತ್ತೊರ್ವಂಗೆ ಕಾರಣವಿಲ್ಲವೆಂಬುದರ್ಥಂ. ಈ ಪ್ರಕಾರದಿಂ ಪ್ರಬಲಸ್ಮೃತಿಯಿಂದೆ ಪೇೞಲ್ಪಟ್ಟತಾಗಿ ಸಕಾರಾಂತ, ಅಕಾರಾಂತಂಗಳಾದೊಡೆಯುಂ ಶಿವನೆಯೇ ಪೇೞಿಸಿಕೊಳ್ಳಲ್ಪಟ್ಟನೆಂಬುದಭಿಪ್ರಾಯಂ.

ಭರ್ಗಶಬ್ದಂ ಅಕಾರಾಂತದಲ್ಲಿ ಉಂಟೆಂಬುದರ್ಕೆ ಪ್ರಮಾಣವೇನೆಂದೊಡೆ— ಮೈತ್ರಾಯಣಿಯರ್ಗೆ ಗಾಯತ್ರ್ಯರ್ಥವಂ ಪೇೞ್ವ ಪ್ರಕರಣಗತವಾಕ್ಯಂ:— "ಯದೇಷ ರುದ್ರೋ ಭರ್ಗಾಖ್ಯೋ ವದಂತಿ ಬ್ರಹ್ಮವಾದಿನಃ" (ಈ ರುದ್ರನು ಭರ್ಗನೆಂಬ ಹೆಸರನುಳ್ಳವನು, ಎಲೈ ಬ್ರಹ್ಮವಾದಿಗಳಿರಾ! ಆವುದಾನೊಂದು ಕಾರಣದತ್ತಣಿಂದೆ ಹೇೞುತ್ತಿಹರು.)

ತಲವಕಾರೋಪನಿಷತ್ತಿನಲ್ಲಿ— "ದ್ವಿತೀಯಃ ಪಾದೋ ಭರ್ಗಮಯಃ" (ಗಾಯತ್ರಿಯ ಎರಡನೆಯ ಪಾದವು ಭರ್ಗಮಯವು.)

ಅಂತೆಯೇ ಯಾಜ್ಞವಲ್ಕ್ಯನಿಂದೆಯುಂ ಪೇೞಲ್ಪಟ್ಟತು:— "ಆದಿತ್ಯಾಂತರ್ಗತಂಯೋೞ ಭರ್ಗಾಖ್ಯಂ ವೈ ಮುಮುಕ್ಷುಭಿಃ" (ಸೂರ್ಯಮಂಡಲಾಂತರ್ಗತನು ಭರ್ಗನೆಂಬ ಪೆಸರನುಳ್ಳವನೆಂದು ಸ್ಮರಿಸಲ್ಪಟ್ಟತು.)

ಅಂತೆಯೆ ಆದಿತ್ಯಪುರಾಣದಲ್ಲಿ— "ತತೋ ದರ್ಭಾಸನೇ ಸ್ಥಿತ್ವಾ ಗಾಯತ್ರೀಂ ಪ್ರಜಪೇದ್ದ್ವಿಜಃ । ಯದ್ಭಾಗ್ಯತ್ರಾರ್ಥಃ ಪರಂ ತತ್ತ್ವಂ ದೇವದೇವೋ ಮಹೇಶ್ವರಃ" (ತತಃ—ಅಷ್ಟರಮೇಲೆ, ದ್ವಿಜಃ—ಬ್ರಾ

ಹ್ಮಣನು, ದರ್ಭಾಸನೇ—ದರ್ಭಾಸನದಲ್ಲಿ, ಸ್ಥಿತ್ವಾ—ಕುಳಿತು, ಗಾಯತ್ರೀಂ—ಗಾಯತ್ರಿಯ ಮಂತ್ರವನ್ನು, ಪ್ರಜಪೇತ್—ಜಪಿಸುವುದು. ಯತ್—ಆವುದಾನೊಂದು, ಗಾಯತ್ರ್ಯಾಃ—ಗಾಯತ್ರಿಯ ಮಂತ್ರದಲ್ಲಿ, ಪರಂ ತತ್ತ್ವಂ—ಪರತತ್ತ್ವರೂಪನಾಗಿ, ದೇವ—ವಿಷ್ಣುಬ್ರಹ್ಮಾದಿದೇವತೆಗಳ್ಗೆ, ದೇವಃ—ಒಡೆಯನಾದ, ಮಹೇಶ್ವರಃ—ಮಹಾದೇವನು, ಸ್ಥಿತಃ—ಇರ್ಪನು.) ಮತ್ತಂ "ಆದಿತ್ಯಮಂಡಲಾಸೀನಂ ರುಕ್ಮಾಭಂ ಪುರುಷಂ ಪರಂ । ಧ್ಯಾಯನ್ ಜಪೇತ್ತದಿತ್ಯೇತಾಂ ನಿಷ್ಕಾಮೋ ಮುಚ್ಯತೇ ದ್ವಿಜಃ" (ಸೂರ್ಯಮಂಡಲಮಧ್ಯಸ್ಥನಾದ, ಹೊಂಬಣ್ಣನಾದ, ಶ್ರೇಷ್ಠನಾದ, "ಪುರುಷೋವೈರುದ್ರಃ" ಎಂದು ಶ್ರುತಿಪ್ರಸಿದ್ಧನಾದ ರುದ್ರನನ್ನು, ಧ್ಯಾನಿಸುತ್ತಲು, ಜಪಿಸುವುದು; ಇತ್ಯೇತಾಂ—ಈ ಗಾಯತ್ರೀಮಂತ್ರವನ್ನು ಆ ಭರ್ಗಶಬ್ದವಾಚ್ಯನಾದ ಹಿರಣ್ಮಯಾಭನಾದ ರುದ್ರನೇ ಎಂದು ಬ್ರಾಹ್ಮಣನು, ಅಱಿತು, ಮುಚ್ಯತೇ—ತೊಂದರೆಯಿಲ್ಲದವನಾಗಿ ಬಿಡಲ್ಪಡುತ್ತಿಹನು.)

"ವೇದಮಾತಾಚಗಾಯತ್ರೀ" ಸಕಲ ವೇದಂಗಳಿಗೂ ಗಾಯತ್ರೀ ಮಂತ್ರವು ಜನನಿಯಾದ ಕಾರಣಂ ಸಮಸ್ತ ವೇದಂಗಳೂ ಶಿವಪರವೆಂದಱಿಯದೆ ವೈಷ್ಣವರೆಲ್ಲರೂ ಭವಕ್ಕೆ ಗುಱಿಯಾದವರೆಂಬುದೀಸೂತ್ರದ ಬಹುಶಬ್ದನಿರ್ವಚನಾರ್ಥಂ. ‖೯‖

ಪದ ‖ ಶೌರಿಯೋಂಕಾರತಾರೀಮಾಗ್ರವಿದ್ಯೋತ ।
ಮೋರಂತೆ ಏಕಾದಶಾತ್ಮಾನಮಾತ್ಮಾನಂ ।
ನಾರಸಿಂಹಂ ನತ್ವಾ ಎಂದುದು ಶ್ರುತಿ ।
ನಾರಾಯಣನೆ ಓಂಕಾರನಿಲಯನೆಂ ।
ದಾರಯ್ಯದೆ ನುಡಿವುದು ಪುಸಿ ಕೇಳೆಲೊ ।
ನಾರಸಿಂಹಂ ಎಂದವಾಂತರವಾದವ ।
ತಾರವಾಚಕವಾದುದಱಿಂದೆ ಅವನು ಉ ।
ಕಾರನಿಲಯನಾದನಾತ್ಮಾನವೆಂಬುದು ।
ಸಾರಸಭವನಾತ್ಮಾನವೆನಿಸನು ವಿ ।
ಚಾರಿಸಲಾತ್ಮನ್ಯೇದವಾತ್ಮಾನವೆಂ ।
ದೀರೀತಿಯಿಂದಾತ್ಮಭವನಕಾರಸ್ಥನಂ ।
ಧೀರನೆನಿಪ ಷಣ್ಮುಖ ರುದ್ರರ ಪಿತೃ ।

ನಾರಾಜಧರನವಱಿಂದುದು ಸಿದ್ಧವೇ ।
ಕಾರಸಾರೋಂಕಾರತುರೀಯಾಗ್ರವಿದ್ಯೋತ ।
ನಾರವಮಾಪತಿಯು ಮೀಱಿದ ಶಂಭುವೆಂದವ ।
ನಾರತಂ ಪೇೞ್ವುದಂ ಶ್ರುತ್ಯರ್ಥವಱಿಯದೆ ।
ಮಾರಪಿತನೆಂಬುದಲ್ತಾಯರ್ಥದೊಳು ಅ ।
ಕಾರಂ ಬ್ರಹ್ಮಾಣಂ ನಾಭೌ ಎಂದು ಉ ।
ಕಾರಂ ವಿಷ್ಣುಹೃದಯೇ ಯೆಂದುದು ಮ ।
ಕಾರಂ ರುದ್ರಂ ಭ್ರೂಮಧ್ಯೇ ಓಂ ।
ಕಾರಂ ಸರ್ವೇಶ್ವರಂ ದ್ವಾದಶಾಂತಯೆಂ ।
ದೀರೀತಿಯುತ್ತರತಾಪನಿಯಂ ಪೇೞೆ ।
ಘೋರನೆ ಶಿವಮದ್ವೈತಂ ಚತುರ್ಥವು ।
ಕಾರ ಉಕಾರ ಮಕಾರಗುಣಾತೀತ.।
ನಾರಾಜಧರಸರ್ವೇಶ ಯೆಂದುದು ಶ್ರುತಿ ।
ಮೀಱದೆ ಬ್ರಹ್ಮಾಸದಾ ಶಿವೋಂ ಎಂದು ಓಂ ।
ಕಾರಮಱಿಯನೆನುತೆ ತೈತ್ತಿರೀಯದೊಳ್ ।
ಸಾಱಿತು ಶಿವತಾನೆಂದು ನಾದಾತ್ಮಯೋಂ ।
ಕಾರರೂಪಾಯುಯೆಂದು ಸಕಲಮಂತ್ರೇ ।
ಮಾರನೀಶಾನ ನೆಂದು ಪೊಗೞ್ವುವು ।
ಘೋರನರಕ ತಪ್ಪದು ನಿಮಗಿನ್ನು ॥೧೧॥

"ಓಂಕಾರತುರೀಯೋಗ್ರವಿದ್ಯೋತಮೇಕಾದಶಾತ್ಮಾನಮಾತ್ಮಾನಂ ನಾರಸಿಂಹಂ ನತ್ವಾ" ಎಂದು ಶ್ರುತಿಯಲ್ಲಿ ಪೇೞಿತ್ತಾಗಿ, (ಓಂಕಾರ, ಅಕಾರ, ಉಕಾರ ಮಕಾರಂಗಳತ್ರಣಿಂದೆ, ತುರೀಯ-ನಾಲ್ಕನೆಯದಾದ, ಅಗ್ರ-ತುದಿಯಲ್ಲಿ, ವಿದ್ಯೋತಂ-ಒಪ್ಪುವಂತಹ, ಏಕಾದಶಾತ್ಮಾನಂ-ಏಕಾದಶರುದ್ರರುಗಳ ರೂಪವಾದಂತಹ, ಆತ್ಮಾನಂ- "ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ" ಎಂದು ಶ್ರುತಿ ಸಿದ್ಧವಾಗಿ ಪರಮಾತ್ಮನೆಂದು ಪೇೞಿಸಿಕೊಳ್ಳಲ್ಪಟ್ಟ ಅದ್ವಿತೀಯನಾದ ತ್ರಿಮೂರ್ತಿಗಳತ್ತಣಿ ನಾಲ್ಕನೆಯುವನಾದ ಪರಮೇಶ್ವರನೆ, ನಾರಸಿಂಹಂ- "ನರಾಣಾಂ ಸಮೂಹಂ ನಾರಂ" ನರರುಗಳ ಸಮೂಹವುನಾರಂ ಎನಿಸುವುದು. ಸಿಂಹಂ ಎಂಬಲ್ಲಿ "ಹಿಂಸಾ ಸಿಂಹಾಯಾಂ" ಎಂಬ ಧಾ

ತುವಿನಿಂ ವರ್ಣವ್ಯತ್ಯಯುವಾಗಿ ಸಿಂಹವೆಂದಾದುದಾಗಿ ಸರ್ವನರರನು ಮ ಹಾಪ್ರಳಯದೊಳು ಸುಖಮನ್ಯೆದಿಸಲೋಸುಗಮಾಗಿ ಸಂಹಾರುಗೈವ ಕ ತದಿಂ ನಾರಸಿಂಹನೆನಿಸಿಕೊಂಡನು. ಅಂತಪ್ಪ ಮಾದೇವನನ್ನು, ನತ್ವಾ- ನಮಸ್ಕರಿಸಿ) ಓಂಕಾರರೂಪನೆಂದು ಪೇಳುತ್ತಾಗಿ ನಾರಸಿಂಹಪದದಿಂ ವಿ ಷ್ಣುಪರವೆಂಬುದುಚಿತಮಲ್ತು.

ಅದೆಂತೆನಲವಾಂತರವಾದ ಮಕಾರವಾಚಿಯಂ ಶ್ರುತಿಯೊಳ್ ತು ರೀಯತ್ವಮಾಗಿ ಪೇಳಲ್ಪಡದಾಗಿ; "ಅಪೂರ್ವ್ಯಣೋಃ ಶರಭಾಯ ಖು ಷಿಬಂಧೇಥವೇ" ಎಂದು ಶ್ರುತಿಪ್ರಸಿದ್ಧವಾಗಿ ಶರಭನಿಂ ಭಂಗವಡೆದ ನೃಸಿಂಹಂಗೆ ತುರೀಯತ್ವವೆಂಬಿಗುಮಿಲ್ಲವಾಗಿ; ಮತ್ತಂ "ಏಷ ಉಗ್ರ ಏವೈಷಹಿ ಸರ್ವದಾ ಸರ್ವಾತ್ಮಾ ನಾರಸಿಂಹೋಸೌ ಪರಮೇಶ್ವರೋ ಸೌ" (ಏಷಃ—ಹಿಂದೆ ಹೇಳಲ್ಪಟ್ಟ ಓಂಕಾರತುರೀಯನೇ, ಉಗ್ರ ಏವ- "ಉಗ್ರಃಕಪರ್ದೀಶ್ರೀಕಂಠಃ" ಎಂದು ನಿಘಂಟುಪ್ರಸಿದ್ಧವಾಗಿ ಉಗ್ರಶಬ್ದವಾಚ್ಯನಾದ ಮಹಾದೇವನೇ, ಏಷಹಿ—ಈ ತುರೀಯನೇ, ಸರ್ವದಾ—ಏಗಳುಂ, ಸರ್ವಾತ್ಮಾ-ಸರ್ವಾಂತರ್ಯಾಮಿಯು, ಅಸೌ ನಾರಸಿಂಹಃ—ಈ ನಾರಸಿಹ್ಮಶಬ್ದವಾಚ್ಯನೇ, ಅಸೌ—ಈ, ಪರಮೇಶ್ವ ರಃ—ಈಪರಮೇಶ್ವರನು) ಇಂತೆಂದು ಅದೇ ಶ್ರುತಿಯ ಮುಂದಣವಾಕ್ಯದಲ್ಲಿ ನಾರಸಿಂಹವಾಚ್ಯನು ಪರಮೇಶ್ವರನೆಂದು ಪೇಳುತ್ತಾಗಿ; "ಸರ್ವೇವೇ ದಾಯತ್ಪದಮಾಮನಂತಿ" ಎಂದು ಸಕಲವೇದಂಗಳುವೊರ್ವನನೆ ಪೇಳ್ವು ವಾಗಿ; "ಏಕಾದಶಾತ್ಮಾನಂ" ಏಕಾದಶರುದ್ರಾತ್ಮನು ಈಶ್ವರನೇ ಅಲ್ಲದೆ ವಿಷ್ಣುವಿಂಗೆ ಏಕಾದಶಾತ್ಮತ್ವಮಿಲ್ಲವಾಗಿ; "ಶಿವಮದ್ವೈತಂ ಚತುರ್ಥಂ ಮನ್ಯಂತೇ" ಎಂದು ತ್ರಿಮೂರ್ತಿಗಳತ್ತಣಿಂ ತುರೀಯತ್ವಮಂ ಶಿವಂಗೆ ಪೇಳುತ್ತಾಗಿ; ವಿಷ್ಣುವಿಂಗೆ ಸಾಕ್ಷಾತ್ ತ್ರಿಮೂರ್ತಿಗಳತ್ತಣಿಂದೆ ತುರೀ ಯತ್ವಮಿಲ್ಲವಾಗಿ; ಸ್ವವ್ಯೂಹಗತರಾದ ಅನಿರುದ್ಧ ಪ್ರದ್ಯುಮ್ನ ಸಂಕ ರ್ಷಣರೆಂಬ ತ್ರಿಮೂರ್ತಿಗಳತ್ತಣಿಂ ತುರೀಯತ್ವಮಲ್ಲದೆ ಸಾಕ್ಷಾತ್ತ್ರಿ ಮೂರ್ತಿಗಳ್ಗೆ ಕಾರಣಮಿಲ್ಲವಾಗಿ; "ತ್ರಿಯಂಬಕೋಂ ಬಕೋ ನಾ ಮ ರುದ್ರೋ ನಾರಾಯಣಃಶಿರಶ್ಯಂಕುನಾ ಚಕರ್ಥ" ಎಂದು ಯಜು ರ್ವೇದದಲ್ಲಿ ಆದಿನಾರಾಯಣಂಗೆ ರುದ್ರನಿಂದೆ ಮಾಡಲ್ಪಟ್ಟ ನಿಗ್ರಹಂ

ಪೇಳಿತ್ತಾಗಿ; ಈಪ್ರಕಾರದಿಂ ವಿಷ್ಣುವಿಂಗೆ ಅನ್ಯಾಧೀನತ್ವದಿಂ ಪರ ಬ್ರಹ್ಮತ್ವಮೆಯಿಲ್ಲವಾಗಿ ತುರೀಯತ್ವಮಂ ಪೇಳಲಾಗರದಾಗಿ; ಮತ್ತಂ ಉತ್ತರತಾಪನೀಯದಲ್ಲಿ– "ಅಕಾರಂ ಬ್ರಹ್ಮಾಣಂ ನಾಭೌ ಉಕಾರಂ ವಿಷ್ಣುಂ ಹೃದಯೇ ಮಕಾರಂ ರುದ್ರಂ ಭ್ರೂಮಧ್ಯೇ ಓಂಕಾರಂ ಸರ್ವೇಶ್ವರಂ ದ್ವಾದಶಾಂತೇ" (ಅಕಾರಂ–ಅಕಾರಕ್ಕೆ ಅಧಿದೇವತೆಯಾದ, ಬ್ರಹ್ಮಾಣಂ–ಬ್ರಹ್ಮನನ್ನು, ನಾಭೌ–ನಾಭಿಸ್ಥಾನದಲ್ಲಿ, ಧ್ಯಾಯೇತ್–ಧ್ಯಾನಿಸುವುದು. ಉಕಾರಂ–ಉಕಾರಕ್ಕೆ ಅಧಿದೇವತೆಯಾದ, ವಿಷ್ಣುಂ–ವಿಷ್ಣುವನ್ನು, ಹೃದಯೇ–ಹೃದಯಸ್ಥಾನದಲ್ಲಿ, ಧ್ಯಾಯೇತ್–ಧ್ಯಾನಿಸ ತಕ್ಕದು. ಮಕಾರಂ–ಮಕಾರಕ್ಕೆ ಅಧಿಪತಿಯಾದ, ರುದ್ರಂ–ರುದ್ರನನ್ನು, ಭ್ರೂಮಧ್ಯೇ–ಭ್ರೂಮಧ್ಯಸ್ಥಾನದಲ್ಲಿ ಧ್ಯಾನಿಸುವುದು. ಓಂಕಾರಂ–ಓಂಕಾರಸ್ವರೂಪನಾದ, ಪರಮೇಶ್ವರಂ–ತ್ರಿಮೂರ್ತಿಗಳತ್ತಣಿಂ ಮೀಱಿದ ಮಹಾದೇವನನ್ನು, ದ್ವಾದಶಾಂತೇ–ಭ್ರೂಮಧ್ಯದಿಂ ಮೇಲೆ ಹನ್ನೆರಡಂಗುಲಪ್ರಮಾಣದಿಂದತ್ತಲಿರ್ದ ಬ್ರಹ್ಮರಂಧ್ರದಲ್ಲಿ ಧ್ಯಾನಿಸುವುದು.) ಇಂತೆಂದು ಬ್ರಹ್ಮವಿಷ್ಣುರುದ್ರರ್ಗೆ ಉತ್ತರೋತ್ತರಸ್ಥಾನಂಗಳಂ ಪೇಳಿ ಪರಶಿವಂಗೆ ಸರ್ವಸ್ಥಾನೋತ್ಕೃಷ್ಟವಾದ ಮೂರ್ಧಸ್ಥಾನದೊಳುಪಾಸನತ್ವಮಂ ಪೇಳಿತ್ತಾಗಿ ನಾದಾತ್ಮಕನಾದ ತುರೀಯನೀಶ್ವರನೆಂದೇ ನಿಶ್ಚಯಿಸಲ್ಪಟ್ಟಿತು.

ಮತ್ತಂ "ಅಮಾತ್ರಶ್ಚತುರ್ಥೋಽವ್ಯವಹಾರ್ಯಃ ಪ್ರಪಂಚೋಪಶಮಃ ಶಾಂತಃ ಶಿವೋಽದ್ವೈತ ಓಂಕಾರಃ" (ಅಮಾತ್ರಃ–ಅಕಾರೋಕಾರಮಕಾರಂಗಳೆಂಬ ಮಾತ್ರತ್ರಯಂಗಳಿಂ ಮೀಱಿದ, ಚತುರ್ಥಃ–ನಾಲ್ಕನೆಯವನಾದ, ಅವ್ಯವಹಾರಃ–ವ್ಯವಹಾರಕ್ಕೆ ಗೋಚರನಲ್ಲದ, ಪ್ರಪಂಚ–ಪ್ರಪಂಚದ, ಉಪಶಮಃ–ಉಪಶಮನಕ್ಕೆ ಕಾರಣನಾದ, ಶಾಂತಃ–ಶಾಂತಚಿತ್ತನಾದ, ಅದ್ವೈತಃ–ಎರಡಿಲ್ಲದ, ಶಿವಏವ–ಶಿವನೇ, ಓಂಕಾರಃ–ಓಂಕಾರರೂಪನು. ಏವ ಎಂಬ ನಿರ್ಧಾರಣಾರ್ಥದಿಂದೆ ಶಿವನೊರ್ವನೆ ಅಲ್ಲದೆ ಮತ್ತೊರ್ವಂಗೆ ಕಾರಣತ್ವಮಿಲ್ಲವೆಂಬುದರ್ಥಂ.)

ಮತ್ತಂ ತೈತ್ತಿರೀಯೋಪನಿಷತ್ತಿನಲ್ಲಿ "ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ ಬ್ರಹ್ಮಾಧಿಪತಿ ಬ್ರಹ್ಮಣಾಧಿಪತಿಃ ಬ್ರಹ್ಮಾ

ಶಿವೋ ಮೇ ಅಸ್ತು ಸದಾಶಿವೋಂ" (ಸರ್ವವಿದ್ಯಾನಾಂ—ಸಮಸ್ತವಿದ್ಯಂಗಳ್ಗೆಯುಂ, ಈಶಾನಃ—ಒಡೆಯುನಹನು, ಸರ್ವಭೂತಾನಾಂ—ಸಮಸ್ತಪ್ರಾಣಿಗಳ್ಗೆಯುಂ, ಈಶ್ವರಃ—ಕರ್ತೃವಾದಂತಹ, ಬ್ರಹ್ಮಾಧಿಪತಿಃ—ಬ್ರಹ್ಮಂಗೆ ಪತಿಯುಹನು, ಬ್ರಾಹ್ಮಣಾಧಿಪತಿಃ—ಸಮಸ್ತಬ್ರಹ್ಮರ್ಷಿ ಮೊದಲಾದವರ್ಗೆ ಅಧಿಪತಿಯಹನು, ಬ್ರಹ್ಮಾ—ಪರಬ್ರಹ್ಮವೆನಿಸಿಕೊಳ್ವಾತನು, ಶಿವಃ—ಅಂತಪ್ಪ ಮಾದೇವನು, ಮೇ—ಎನಗೆ, ಅಸ್ತು—ಆಗಲಿ, ಸದಾಶಿವಃ—ಆ ಮಹಾದೇವನು, ಓಂ—ಓಂಕಾರನಹನು.) ಎಂದು ಓಂಕಾರದಲ್ಲಿಯೇ ಅಂತರ್ಗತಮನ್ಯೈಡಿಸಿ ಪೇೞುತ್ತಾಗಿ; "ಓ ಮಿತಿ ಬ್ರಹ್ಮ, ಓಮಿತೀದಂ ಸರ್ವಂ ಬ್ರಹ್ಮ" ಎಂಬು ಓಂಕಾರಮೇ ಪರಬ್ರಹ್ಮಮೆಂದು ಪೇೞುತ್ತು.

ಮತ್ತಂ ಅಥರ್ವಶಿಖೆಯಲ್ಲಿ— "ಓಂಕಾರಸ್ಸಓಂಕಾರೋ ಯಃ ಪ್ರಣವ ಸ್ಸಪ್ರಣವಃ" ಎಂಬುವಾದಿಯಾಗಿ "ತತ್ಪರಂ ಬ್ರಹ್ಮ ಸ ಏಕಃ ಸ ಏಕೋ ರುದ್ರಃ ಸ ಭಗವಾನ್ ಸ ಮಹೇಶ್ವರಸ್ಸ ಮಹಾದೇವಃ" ಎಂದು ಆವುದಾನೊಂದು ಓಂಕಾರವೇ ರುದ್ರನೆಂದು ಪೇೞುತ್ತಾಗಿ; ಅಂತಪ್ಪ ರುದ್ರನೇ ತಾರಕಬ್ರಹ್ಮವೆಂದು ಪೇೞುತ್ತಾಗಿ;

ಶಿವನೊರ್ವನೆ ಓಂಕಾರನಾದಾಗ್ರವಿದ್ಯೋತಮಾನನು, ಎಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ.

ಪದ ॥ ಹರಿಯು ಕಾಲೊಳು ಗಂಗೆಯುದ್ಭವಿಸಿದಳದ ।
ಹರನು ಜಟಾಗ್ರದೊಳಾಂತನೆಂದೊಬ್ಬುವುದು ।
ನರಕಭಾಜನಬುದ್ಧಿ ನಿನಗಿದು ಕೇಳಲೊ ।
ಭರದಿಂದೆ ಗಗನೇಗಮನಾದ್ಗಂಗಾಯೆಂ ।
ದಿರದೆ ನಿರುಕ್ತಾ ತತ್ತ್ವವೇದಿಭಿ ಎಂದು ।
ವರಭೈರವಿಯು ವಾಕ್ಯಮದುಂಟಾಗಿ ಶಂ ।
ಕರ ವ್ಯೋಮಕೇಶ ನಾಕಾಶದೊಳ್ ಗಂಗೆ ಸಂ ।
ಚರಿಪಳಂತದುಕಾರಣದೆ ಮೃಡನು ಗಂಗಾ ।
ಧರನೆನಿಸಿದನು ವಿಯದ್ವಿಷ್ಣುಪದವೆಂದ ।
ಮರವಾಕ್ಯಮುಂಟಾಗಿ ವಿಷ್ಣುಪದಂ ಎನೆ ।
ಸುರವರ್ತ್ಮಕೆ ಪೆಸರುಂಟು ಸಮಸ್ತಮಂ ।

ಪರಿವೇಷ್ಟಿಸಿರ್ಪುದಱಿಂ ವಿಷ್ಣುಪದವೆಂದ ।
ದರವಿಗ್ರಹಂ ವಿಶಲ್ಯ ವ್ಯಾಪ್ತವೆಂದೆನೆ ।
ಪರತರಗಂಗೆಯಾಕಾಶಸಂಬಂಧವಾ ।
ಗಿರಲದಱಿಂ ವಿಷ್ಣುಪದಿಯೆನಿಸಿದಳು ಕೇ ।
ಳೊಱವೆನಿಯುಂ ಹೈಮವತೀಗಂಗಾಯೆಂ ।
ದರರೆ ಜ್ಯೇಷ್ಠಾಹಿಮವತ್ಸುತಾಯೆಂದು ವಿ ।
ಸ್ತರಿಸಿ ರಾಮಾಯಣದಲ್ಲಿ ಪೇಳ್ವುದು ಗಂಗೆ ।
ಗಿರಿಸುತೆ ಯೆಂದಾದನಂತಪುರಾಣೋಕ್ತಿ ।
ವಿರಚಿಸುತಿಪವದಱಿಂತೆ ಧನಂಜಯಮಂ ।
ಪಠಿಸಿಸು ಜಾಹ್ನವೀಹಿಮವತ್ಸುತಾಯೆನೆ ।
ಧರೆಯು ಪಾವನವಾಡಲು ಗಿರಿಸುತೆಯಾದ ।
ಳುರಗಭೂಷಣನಾದಿಶಕ್ತಿ ಮಹಾಗಂಗೆ ।
ಗಿರಿಷೋಕ್ತಿಯುಂಟು ಮಮೈವ ಸಾಪರಮೂರ್ತಿ ।
ಪರಮಲ್ತು ತೋಯರೂಪಾ ಶಿವಾತ್ಮಿಕಾ ಯೆಂದು ।
ಮುರರಿಪು ದಾನವಂ ಬೇಡ್ವಾಗ ಬಲಿಧಾರೆ ।
ಯೆಱೆದಂ ಸಾ ಗಂಗಾತೋಯಂ ಭೃಂಗಾರು ।
ಸ್ಥಿರವಾದಾಯು ಎಂಬುದು ಕೂರ್ಮೋಕ್ತಿಯು ।
ಸುರವೈರಿಯವತಾರದಿಂ ಮುನ್ನಲುಂಟೆಂದು ।
ನಿರವಿಸುತ್ತಿದೆ ಕೇಳು ಕಾಲೊಳಗವಾಂ ।
ತರನದಿ ಜನಿಯಿಸಿದಳು ಕಮಂಡಲು ।
ಶರವ ತೆಗೆದು ಕಾಲೊಳಗಿಡಲು ಬ್ರಹ್ಮ ।
ಹರಿದು ಹರಿಯು ಕಾಲ ಹರೇಃ ಪಾದವೆಂ ।
ದಿರದಭಂಜಯುತೆಂದು ಬ್ರಹ್ಮಾಂಡವಮುಸುರಲು ॥೧೧॥

ಹರಿಯ ಕಾಲೊಳು ಕುಟಲೆಯೆಂಬ ನದಿ ಪುಟ್ಟಲಾಗಿ ಮಹಾಗಂಗೆ ಪುಟ್ಟಿದಳೆಂದಾಡುವರ್, ಅದು ಭವಕ್ಕೆ ಹೇಷ್ಯ.

"ಗಗನೇ ಗಮನಾದ್ಗಂಗಾ ನಿರುಕ್ತಾ ತತ್ತ್ವವೇದಿಭಿಃ ॥" (ಗಗನೇ–ಆಕಾಶದಲ್ಲಿ, ಗಮನಾತ್–ಸಂಚಾರವುಳ್ಳವಳಾಬಕಾರಣ, ಗಂಗಾ–ಗಂಗೆಯೆಂದು, ತತ್ತ್ವವೇದಿಭಿಃ–ತತ್ತ್ವಜ್ಞರಿಂದೆ, ನಿರುಕ್ತಾ–ಹೇಳಲ್ಪಟ್ಟಳು.) ಇಂತೆಂದು ಭೈರವೀಯವಾಕ್ಯಮುಂಟಾಗಿ ಆಕಾಶದಲ್ಲಿ ಗಮನ

ವುಳ್ಳವಳಾದಕಾರಣ ಗಂಗೆಯೆಂಬ ಹೆಸರಾಯಿತು. ಆಕಾಶವೇ ಮಹಾದೇವ ನಿಗೆ ಕೇಶವಾದ ಕಾರಣ ಗಂಗಾಧರನೆನಿಸಿಕೊಂಡನು.

"ಗಂಗಾ ವಿಷ್ಣುಪದೀ ಜಹ್ನುತನಯಾ ಸುರನಿಮ್ನಗಾ" ಎಂದು ನಿಘಂಟಿನಲ್ಲಿ ಪೇೞಿತ್ತಾಗಿ, ವಿಷ್ಣುಪದಿಯೆಂದೊಡೆ ವಿಷ್ಣುಪಾದಸಂ ಬಂಧಮುಂಟಾದವಳೆಂದಾಡಲಾಗದು. "ವಿಯದ್ವಿಷ್ಣುಪದಂ ವಾತು ಪುಂ ಸ್ಯಾಕಾಶವಿಹಾಯಸೀ" ಎಂದು ಅಮರನಿಘಂಟಿನ ವಾಕ್ಯಮುಂಟಾಗಿ ವಿಷ್ಣುಪದಿಯೆಂದೊಡೆ ಆಕಾಶಕ್ಕೆ ಪೆಸರು. "ವಿಶಲ್ ವ್ಯಾಪ್ತೌ" ಎಂಬ ಧಾತುವಿನಿಂದೆ "ವಿಷ್ಣುಪದಂ" ಎಂದಾಯಿತ್ತು. ಸರ್ವದಿಕ್ಕಿನಲ್ಲಿ ವ್ಯಾ ಪಿಸಿಕೊಂಡಿರುವುದಾದಕಾರಣ "ವಿಷ್ಣುಪದಂ" ಎಂದಾಯಿತ್ತು. ಆಕಾಶ ದಲ್ಲಿ ಗಂಗೆಯಿರುವಳಾದುದಱಿಂದೆ "ವಿಷ್ಣುಪದಿ" ಯೆಂದೆನಿಸಿಕೊಂಡಳು.

ಮತ್ತಂ ಗಂಗೆ ಎಲ್ಲಿ ಜನಿಯಿಸಿದಳು? ಎಂದೊಡೆ—"ಇಯಂ ಹೈಮ ವತೀಗಂಗಾ ಜ್ಯೇಷ್ಠಾ ಹಿಮವತಸ್ಸುತಾ" (ಇಯಂ—ಈ, ಹೈಮವತೀ— ಹಿಮವತ್ಸಂಬಂಧಿನಿಯಾದಂಥ, ಗಂಗಾ—ಗಂಗೆಯು, ಹಿಮವತಃ—ಹಿಮ ವಂತನ, ಜ್ಯೇಷ್ಠಾ—ಹಿರಿಯಳಾದ, ಸುತಾ—ಮಗಳು) ಇಂತೆಂದು ರಾ ಮಾಯಣದಲ್ಲಿ ಪೇೞಿರ್ದುದಾಗಿ; ಮತ್ತಂ ಧನಂಜಯ ನಿಘಂಟಿನಲ್ಲಿ— "ಜಾಹ್ನವೀ ಹಿಮವತ್ಸುತಾ" ಎಂದುದಾಗಿ; ಸರ್ವಜನರಂ ರಕ್ಷಿಸಲೋ ಸುಗಮಾಗಿ ಹಿಮವಂತನ ಮಗಳಾದಳು. "ಮಮೈವ ಸಾಪರಾಮೂರ್ತಿ ಸ್ತೋಯಮೂರ್ತಿಶ್ಶಿವಾತ್ಮಿಕಾ" (ತೋಯರೂಪಾ—ಉದಕರೂಪವಾ ದಂಥ, ಶಿವಾತ್ಮಿಕಾ—ಶಿವಸಂಬಂಧವಾದುಥ, ಸೈವ—ಆ ಗಂಗೆಯೇ, ಮ ಮ—ಎನ್ನ, ಅಪರಾ ಮೂರ್ತಿಃ—ಎರಡನೆಯ ಮೂರ್ತಿಯಾದಳು, ತ ನ್ನಿಂದಮೆ ಜನಿಯಿಸಿದ ತನ್ನ ಶಕ್ತಿ ಯೆಂಬುದರ್ಥ). ಇಂತೆಂದು ಈಶ್ವರನ ವಾಕ್ಯಮುಂಟಾಗಿ ಗಂಗೆ ಮತ್ತೊರ್ಬಳಲ್ಲವೆಂಬುದಱಿವುದು.

"ಸಗಂಗಾತೋಯಮಾದಾಯ ಭೃಂಗಾರುಂ ಸ್ವರ್ಣನಿರ್ಮಿತಂ" (ಸ್ವರ್ಣನಿರ್ಮಿತಂ—ಸುವರ್ಣದಿಂದೆ ನಿರ್ಮಿಸಲ್ಪಟ್ಟ, ಸಗಂಗಾತೊ ಯಂ—ಗಂಗಾಜಲದಿಂ ಕೂಡಿದ, ಭೃಂಗಾರುಂ—ಚಿನ್ನದ ಚೊಂಬನ್ನು, ಆ ದಾಯ—ತೆಗೆದುಕೊಂಡು,) ಧಾರೆಯನೆಱೆದನೆಂದು ಕೂರ್ಮಪುರಾಣದಲ್ಲಿ ಪೇೞಿತ್ತಾಗಿ ಬಲಿಚಕ್ರವರ್ತಿ ಕೃಷ್ಣಂಗೆ ಧಾರೆಯನೆಱೆವಾಗ ದೇವ

ಗಂಗೋದಕಧಿಂದೆ ಧಾರೆಯುನೆರೆದಿದನೆಂಬುದಾಗಿ ವಾಮನಾವತಾರದಿಂ ಮೊದಲೆ ಗಂಗೆಯುಂಟೆಂದು ನಿಶ್ಚಯಿಸಲ್ಪಟ್ಟಿತು.

"ಸ್ಕಂಧಶಕ್ತ್ಯಾ ಹತೋ ಯತ್ರ, ವರಾಹಾಖ್ಯೋ ಮಹಾಹರಿಃ ।
ಅದ್ಯಾಪಿ ಸೂಕರಾರೋಹಂ ತೀರ್ಥಂ ಗಂಗಾತಟೇ ಸ್ಥಿತಂ" (ಸ್ಕಂಧಶಕ್ತ್ಯಾ–ಕುಮಾರಸ್ವಾಮಿಯ ಶಕ್ತಿಯೆಂಬ ಆಯುಧದಿಂದೆ, ಯತ್ರ–ಆವೆಡೆಯಲ್ಲಿ, ವರಾಹಾಖ್ಯಃ–ವರಾಹನೆಂಬ ಅವತಾರವುಳ್ಳ, ಮಹಾಹರಿಃ–ವಿಷ್ಣುವು, ಹತಃ–ಮೃತಿಯನೈದಿಸಲ್ಪಟ್ಟನು, ತತ್ರ–ಆವೆಡೆಯಲ್ಲಿ, ಅದ್ಯಾಪಿ–ಈಗಳೂ, ಸೂಕರಾರೋಹಂ–ಸೂಕರಾರೋಹವೆಂಬ, ತೀರ್ಥಂ–ತೀರ್ಥವು, ಗಂಗಾ–ಗಂಗೆಯ, ತಟೇ–ತಡಿಯಲ್ಲಿ, ಸ್ಥಿತಂ–ಇರ್ದಪುದು.) ಇಂತೆಂದು ಕಾಳಿಕಾಖಂಡದಲ್ಲಿ ಪೇಳುತ್ತಾಗಿ ವಾಮನಾವತಾರಕ್ಕಿಂತ ಮುಂಚಿತವಾದ ವರಾಹಾವತಾರಮಂ ಕುಮಾರಸ್ವಾಮಿಯು ಗಂಗೆಯ ತಡಿಯಲ್ಲಿ ಕೊಂದನೆಂದುದಾಗಿ ವರಾಹಾವತಾರದಿಂ ಮುನ್ನವೆ ಗಂಗೆಯ ಉತ್ಪತ್ತಿ ಉಂಟೆಂಬುದರ್ಥಂ.

"ಅಂತಃಸ್ವಚ್ಛಂದಸಂಪನ್ನಂ ಪರಮಾನಂದಮೇದುರಂ । ಪರಮಾಕಾಶಮಧ್ಯಸ್ಥಮಾತ್ಮಶಕ್ತ್ಯಾಮೃತಪ್ಲವಂ । ಅಪಾರಮತುಲಂ ದೇವೋ ಬಭಾರ ಶಿರಸಾ ಹರಃ" ಇಂತೆಂದು ರುದ್ರಕೋಟಿಸಂಹಿತೆಯಲ್ಲಿ ಮಹಾದೇವನ ಪರಮಾನಂದದಿಂದ ಜನಿಯಿಸಿದವಳೆಂದುಂ ಮಹಾದೇವನ ಆತ್ಮಶಕ್ತಿಯೆಂದುಂ ಪೇಳುತ್ತಾಗಿ, ಗಂಗೆ ಪರಮೇಶ್ವರನ ಚಿಚ್ಛಕ್ತಿಯೆಂದರಿವುದು.

ವಿಷ್ಣುವಿನ ಕಾಲೊಳು ಜನಿಯಿಸಿದ ನದಿ ಆವುದೆಂದೊಡೆ, ಪುರಾಣಂ:–
"ವಿಷ್ಣೋರ್ನಖವಿನಿರ್ಭಿನ್ನಕಟಾಹೇ ಭೇದಿತೇಂಬರಾತ್ । ಕುಟಿಲಾ ತಸ್ಯ ಪಾದಾಗ್ರಾತ್ಸಸಾರಾಕುಟಿಲಾ ತತಃ" (ವಿಷ್ಣೋಃ–ವಿಷ್ಣುವಿನ, ನಖ–ಪಾದನಖದಿಂದೆ, ವಿನಿರ್ಭಿನ್ನ–ಒಡೆಯಲ್ಪಟ್ಟ, ಕಟಾಹೇ–ಬ್ರಹ್ಮಾಂಡಕಟಾಹವು, ಭೇದಿತೇ ಸತಿ–ಭೇದಿಸಲ್ಪಡುತ್ತಿರಲಾಗಿ, ಕುಟಿಲಾ–ಕುಟಿಲೆಯೆಂಬ ಬಹಿರಾವರಣಜಲವು, ಅಂಬರಾತ್–ಆಕಾಶದತ್ತಣಿಂದೆ, ತಸ್ಯ–ಆ ಕೃಷ್ಣನ, ಪಾದಾಗ್ರಾತ್–ಪಾದದ ತುದಿಯತ್ತಣಿಂದೆ, ತತಃ–ಅಷ್ಟ

ಐವೇೀಲೆ, ಕುಟಿಲಾ—ಕುಟಲೆಯೆಂಬ ನದಿಯು, ಸೆಸಾರ—ಹೊಟಿಟಳು.) ಕುಟಲೆಯೆಂಬ ನದಿಯು ಭೂಮಿಗೆ ಬಿಬ್ದು ಮಹಾಗಂಗೆಯಂ ಬೆರದ ಳಾಗಿ, ಶಿವಂ ಧರಿಸಿದನೆಂದಾಡುತಿರ್ಪರು. "ನಗರೀನಿರ್ಝರಾದ್ಯಂಭೋ ಗಂಗಾಂ ಪ್ರಾಪ್ಯ ಯಥೈಕತಾಂ" ಎಂದು ಗ್ರಾಮದಲ್ಲಿಯ ಉದಕನಿರ್ಝ ರೋದಕಂಗಳು ಮೊದಲಾದುವೆಲ್ಲಂ ಮಹಾಗಂಗೆಯನ್ನೈದಿ ಪವಿತ್ರವನ್ನೈ ದಿದುವು ಎಂದುದಾಗಿ, ಸರ್ವಕ್ಕಂ ಗಂಗೆಯೆ ಮೂಲಕರ್ತೃವಾದ ಕಾರಣಂ ನಿಷಿದ್ಧವಿಲ್ಲ.

"ಸತ್ಯಲೋಕಹಿತಾರ್ಥಾಯ ಪದ್ಮಯೋನಿಃ ಪ್ರಜಾಪತಿಃ । ಕಮಂಡುಲುಜಲಾಸ್ತ್ರೇಣ ಹರೇಃ ಪಾದಮಭಂಜಯತ್" (ಸತ್ಯಲೋಕಹಿತಾರ್ಥಾಯ—ಸತ್ಯಲೋಕದ ಹಿತಕ್ಕೋಸುಗ, ಪದ್ಮಯೋನಿಃ—ಪದ್ಮಕ್ಕೆ ಕಾರಣನಾದಂಥ, ಪ್ರಜಾಪತಿಃ—ಬ್ರಹ್ಮನು, ಕಮಂಡುಲುಜಲಾಸ್ತ್ರೇಣ—ಕಮಂಡುಲೋದಕವೆಂಬ ಆಯುಧದಿಂದೆ, ಹರೇಃ—ವಿಷ್ಣುವಿನ, ಪಾದಂ—ಪಾದವನ್ನು, ಅಭಂಜಯತ್—ಕತ್ತರಿಸಿದನು.) ಇಂತೆಂದು ಬ್ರಹ್ಮಾಂಡಪುರಾಣದಲ್ಲಿ ಪೇೞುತ್ತಾಗಿ, ತನ್ನ ಭಂಗವಂ ತಾನಱಿಯದೆ ವಿಷ್ಣುವಿನ ಕಾಲೊಳು ಆಡಿಗಂಗೆಯು ಪುಟ್ಟಿದಳೆಂಬುದು ಸಟೆಯೆಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ ॥೧೧॥

ಪದ ॥ ಶಾಂತನನಿಪ ಚಕ್ರವರ್ತಿಗೆ ಗಂಗೆಯೋ ।
ರಂತೆ ತಾಂ ಸತಿಯಾದಳೆಂದು ಭಾರತವಾಕ್ಯ ।
ಮಂ ತಡೆದುದೆ ಪೇೞುವೈ ಇದು ಪುಸಿ ಕೇಳು ।
ತಾಂ ತವೆ ಬ್ರಹ್ಮಸ್ವರೂಪಿಣೀಂ ಗಂಗಾಮೆಂ ।
ದಿಂತು ಕಾಶಿಕಖಂಡವಾಕ್ಯಮುಂಟಾಗಿರ ।
ಲೆಂತು ಪೇೞಬಲ್ಲ ಹುದದು, ಘೋರನರಕಕ್ಕೆ ।
ಮುಂತೆ ಕಾರಣಮಲ್ಲದೆ ತಮೋಗುಣಗಳ ।
ನಂತಗಳನು ಹತಿಸುತೆ ನಿರಯಕೆ ಬೀೞ್ದಿ ।
ರಂತಲ್ಲದೆ ರಾಮಾಯಣ ಭಾಗವ ।
ತಾಂತರೋಕ್ತಿಗಳನಾಲಿಪ ದುಷ್ಟರಿಗೆ ಪಾರ ।
ವಂ ತಪ್ಪಲಱಿಯದದಂತೆನೆ ಪಾಂಡವ ।

ರಂತು ಧರಿತ್ರಿಗೋಸುಗ ಗುರುಪಿತೃಗಳ ।
ನಂತಬಂಧುಗಳ ಹತಸಿ ನಿರಯಕೆ ಬಿಟ್ಟಿ ।
ರಂತಲ್ಲದೆ ಹಾದರಕ್ಕೆಳಸಿದ ನಿರ್ಜ ।
ರಾಂತಕನಂ ಕೊಂದು ಬ್ರಹ್ಮಹತ್ಯೆಗೊಳಗಾಗಿ ।
ಭ್ರಾಂತಿಗೊಳುತೆ ಸತಿಯಂ ಪೂಜುಮಡಿಸಿ ।
ಕಂತುಹರನ ಭಜಿಸುತೆ ಭವವಂ ನೀಗಿ ।
ದಂತಪ್ಪ ರಘುಜನ ಲೌಕಿಕವಾರ್ತೆಗ ।
ಳೆಂತು ಮುಕ್ತಿಗೆ ಸಾಧನ ಶಿವನಿಂದೆಯು ।
ನಾಂತ ಭಾಗವತಾದಿಗಳು ಪಾಪಕೆ ಹೇಷ್ಯ ।
ವಂತವ ಬಿಡು ಶಿವಾನಂದಾತ್ಮಿಕಾಂ ಗಂಗಾ ।
ಮಿಂತೆಂದನಂತಪುರಾಣೋಕ್ತಿಗಳುಂಟ ।
ದಂ ತಿಳಿಯದೆ ಗಂಗೆ ಕಾಲೊಳುದಿಸಿದಳೆಂ ।
ಬಂತೆ ನಿನ್ನಯ ಬುದ್ಧಿಯುಗಣಿತನದಿಗಳ ।
ಸಂತತಿಗೆಲ್ಲ ಗಂಗಾನಾಮವುಂಟು ಅ ।
ವಾಂತರನದಿ ಶಾಪದಿ ಸತಿಯಾದಳು।
ಶ್ರಾಂತಂ ಮಹಾಗಂಗೆಯೆಂಬುದನುಚಿತ ಮ ।
ಹಾಂತರ ಬಗೆಯಲ್ಲ ಬ್ರಹ್ಮಾಂಡಂಗಳೊ ।
ಳಂತಾದಿಶಕ್ತಿಯುಮಲ್ಲ ಸಮಸ್ತದಿ ।
ಗಂತಪೂರಿತೆ ತಾನಲ್ಲ ಶಂಕರನ ಜ ।
ಟಾಂತದೊಳಿರ್ದಪಳಲ್ಲ ಸರ್ವೇಶ್ವರಿ ।
ಯಂತಸ್ಥವರಿಯದೆ ನಿಂದಿಸ ಸಲ್ಲ ॥೧೨॥

ಆದಿಗಂಗೆ ಶಂತನುಚಕ್ರವರ್ತಿಗೆ ಹೆಂಡತಿಯಾದಳೆಂದು ಮಾಯಾ ಮೋಹಿತರಾಡುವರ್. "ಬ್ರಹ್ಮಸ್ವರೂಪಿಣೀಂ ಗಂಗಾಂ" ಎಂದು ಕಾಶಿಕಾ ಖಂಡದ ವಾಕ್ಯಮುಂಟಾಗಿರಲು ಬ್ರಹ್ಮಕ್ಕೆ ಜನನಮರಣವಿಲ್ಲಾಗಿ ಅಂ ತಪ್ಪ ಬ್ರಹ್ಮಸ್ವರೂಪಿಣಿಯಾದ ಮಹಾಗಂಗೆಗೆ ಜನನಮರಣಂಗಳೆಂದು ಮಿಲ್ಲಮೆಂಬುದೇ ನಿಶ್ಚಿತಾರ್ಥಂ. ಮತ್ತಂ "ಶಿವಾನಂದಾತ್ಮಿಕಾಂ ಗಂಗಾಂ" ಎಂದು ರುದ್ರಕೋಟಿಸಂಹಿತೆಯುಂಟಾಗಿ, ಶಿವನ ಆನಂದಾತ್ಮಿಕಗಳಾದ ಮ ಹಾಗಂಗೆಗೆ ಅನ್ಯಪತಿಯಂ ಪೇಳ್ವ ಪುರಾಣೇತಿಹಾಸಂಗಳು ನಿರಯಕ್ಕೆ ಕಾರಣಮೆಂಬುದೇ ಯಥಾರ್ಥಂ. ಗಂಗೆಯೆಂದು ಅಂವಾಂತರನದಿಗಳ

ಗೆಲ್ಲಂ ಪೇಸರುಂಟಾಗಿ, ಅವಱೊಳೊರ್ವಳ್ ನಡಿಶಾಪದಿಂ ಜನಿಯಿಸಿದಳೆಂ
ಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ. ॥೧೦॥

ಪದ ॥ ಮುಂದುಗಾಣದೆ ಭಸ್ಮಾಸುರಂಗಿಕ್ಕಿತಾ ।
ನಿಂದುಶೇಖರನು ಪಲಾಯನವಾಂತನಿಂ ।
ತೆಂದು ನುಡಿವಿರೆ ನಾರಕಜೀವಿಗಳಿರ ತಾ ।
ನಂದು ತಾನೇ ವರವಿತ್ತು ತಾನೇ ಕೊಲ್ವ ।
ಮಂದಬುದ್ಧಿಗಳುಂಟೆ ವಿಷವೃಕ್ಷೋಪಿಯಿಂ ।
ತೆಂದು ಸಂವರ್ಧ್ಯಸ್ವಯಂ ಛೇತ್ತುಮಸಾಂಪ್ರ ।
ತಂ ದಲಾನ್ಯಾಯಮಿಂತಿರೆ ತಾನೆ ರಕ್ಷಿಸಿ ।
ಕೊಂದು ಬಿಡುವುದನುಚಿತಮೀಕಥನದಿಂ ।
ಮುಂದೆ ಭೈರವನ ಜನನಕ್ಕೆ ಕಾರಣಮುಂ ।
ಟೆಂದು ಸುಮ್ಮನೆಯಿರಲವನ ಸ್ವಾಮಿದ್ರೋಹ ।
ದಿಂದೆ ಕಾಣಿಸದಿರೆ ಶಂಭುವಾಸಮಯದಿ ।
ಕುಂದದಿವಂ ತ್ರಿಲೋಕಂಗಳ ದಹಿಸುವ ।
ನೆಂದು ಭಯದೆ ಹರಿ ಶರ್ವನಂ ಕೇಳಲಿಂ ।
ತೆಂದನು ಸ್ವಾಮಿದ್ರೋಹಕ್ಕೆಣಿಸುವ ದೈತ್ಯ ।
ನಂ ದಂಡಿಸಲ್ ನಿನಗಧಿಕಾರಮಿತ್ತಿರ ।
ಲಿಂದು ನೂತನ ವಿಚಾರಗಳೇತಕೆಯೆನೆ ।
ಸೌಂದರರೂಪಾಂತು ನಾರಾಯಣಿಯಾಗಿ ।
ಬಂದಸುರನ ಶಿರದಲ್ಲಿ ತತ್ಕರವನೆ ।
ಬಂದಿಸಿ ದಹಿಸಿ ಶಂಕರನ ಸಮೀಪದೊ ।
ಳ್ನಿಂದಿರೆ ತನ್ನ ಶಕ್ತ್ಯಂಶನಿಮಿತ್ತದಿಂ ।
ದಂದಮುರ್ದಪ್ಪಿ ನೆರೆಯಲಾಗ ಭೈರವ ।
ನೆಂದೆಂಬನುದಿಸಿದನದಕೆ ಕೇಳ್ವೆ ಮತ್ತೆ ।
ಸ್ಕಂಧದೊಳ್ ನಾರಾಯಣೀಂ ಸಮಾಲಿಂಗ್ಯ ಯಿಂ ।
ತೆಂದು ಭುಜಾಭ್ಯಾಂ ಸಾಧುಸಾಧ್ವಿತಿ ಮುದ ।
ದಿಂದೆ ತಾಂ ಭೈರವಂ ಜನಯಾಮಾಸ ಯಿಂ ।
ತೆಂದೆನಲಾದಿತ್ಯದಲ್ಲಿ ಯೀಯರ್ಥಮುಂ ।
ಅಂದೆಯ್ದೆ ಬಹುಶೋಕ್ತಿಯಿಂ ಪೇೞ್ದುದು ಮತ್ತೆ ।
ಸಂದೇಹಮೇಂ ನಮೋವಿಷ್ಣುಕಳತ್ರಾಯು ।

ಯೆಂದೆನೆ ಪದ್ಮಾಖ್ಯವು ಭೀರುರುದ್ರ ।
ನಿಂದೆ ಜನಿಸೆ ನಾಮವು ಭೈರವನೆಂದು ।
ಪೊಂದಿತು ಅವತಾರವು ಕಾಪಾಲೀಶ ।
ನಂದು ನಟಿಸಿದನಿವ ಕೇಳಿರೋ ಶಿವ ।
ನಿಂದೆಯಿಂ ಕಿಡುವುದನದ ನೋಡಲಾರೆ ॥೧೩॥

ಮಹಾದೇವನು ಭಸ್ಮಾಸುರಂಗಳ್ಕೆ ಪಲಾಯನವಾದನೆಂದು ನರಕ ಜೀವಿಗಳಾಡುವರ್.

"ವಿಷವೃಕ್ಷೋಽಪಿ ಸಂವರ್ಧ್ಯ ಸ್ವಯಂ ಛೇತ್ತುಮಸಾಂಪ್ರತಂ" (ವಿಷವೃಕ್ಷೋಽಪಿ—ವಿಷವೃಕ್ಷವಾದರೂ, ಸಂವರ್ಧ್ಯ—ಬೆಳೆಯಿಸಿ, ಸ್ವಯಂ—ತಾನೆ, ಛೇತ್ತುಂ—ಛೇದಿಸಲು, ಅಸಾಂಪ್ರತಂ—ಯೋಗ್ಯವಲ್ಲ) ಇಂತೆಂಬ ನ್ಯಾಯಮುಂಟಾಗಿರಲು, ತಾನೆ ವರವಿತ್ತು ತಾನೆ ಕೊಲ್ವುದು ಮಹಾತ್ಮರ ಬಗೆಯಲ್ತು. ಅದಕ್ಕೆ ಸಾಕ್ಷಿ– ಬಾಣಾಸುರನು ವಿಷ್ಣುವಿನ ಕೂಡೆ ಕಾಳೆಗವಂ ಮಾಡಿ, ಹದಿನೆಂಟು ಕಣೆಯದಲ್ಲಿ ವಿಷ್ಣು ಪಲಾಯನವಂ ಹೊಂದಲಾಗಿ, ತನ್ನ ಭುಜದ ತೀಂಟೆಯಂ ಪರಿಹರಿಸುವರಾರುಮಿಲ್ಲವೆಂದು ತನಗೆ ಒಡೆಯನಾದ ಮಹಾದೇವನನೆ ಕಾಳೆಗಕ್ಕೆ ಕರೆಯಲಾಗಿ, ವಿಸ್ಮಿತಮುಖನಾಗಿ ಶಂಭು ತನ್ನ ಭಕ್ತನ ಗರ್ವಮಂ ತಾನೆ ಪರಿಹರಿಪುದುಚಿತಮಲ್ತೆಂದು ಆ ವಿಷ್ಣುವೇ ನಿನ್ನ ಭುಜದ ತೀಂಟೆಯಂ ಪರಿಹರಿಪನೆಂದು ಕಾಳೆಗಕ್ಕೆ ಕಳುಹಿಸಿ, ವೀರಭದ್ರ ವಿಘ್ನೇಶ್ವರಾದಿ ಪ್ರಮಥಗಣಂಗಳೊಡನೆ ತಾನುಂ ಕಾಳೆಗಕ್ಕೈದಿ, "ಅಪಿ ಚಿತ್ಸಮರಂ ಪ್ರಾಪ್ಯ ಭವಿಷ್ಯಸಿ ಮಮಾಧಿಕಃ" (ಅಪಿಚಿತ್—ಒಂದಾನೊಂದು, ಸಮರಂ—ಕಾಳೆಗವನ್ನು, ಪ್ರಾಪ್ಯ—ಐದಿ, ಮಮ—ಎನಗೆ, ಅಧಿಕಃ—ಅಧಿಕನಹನು, ಭವಿಷ್ಯಸಿ—ಆಗುವೆ.) ಇಂತೆಂದು ವಿಷ್ಣುವಿಂಗೆ ಈಶ್ವರನು ವರಪ್ರದಾನಾರ್ಥವಾಗಿಯುಂ ಬಾಣಾಸುರನ ಗರ್ವಹರಣಾರ್ಥವಾಗಿಯುಂ ತಾಂ ಓರೆಯಾಗಿ ಬಾಣಾಸುರನ ಗರ್ವಮಂ ಪರಿಹರಿಸಿದನೆಂದು ಪುರಾಣೋಕ್ತಿಗಳುಂಟು. ಅದಕ್ಕೆ ಸಾಕ್ಷಿ— "ದೋಸ್ಸಹಸ್ರಂ ತ್ವಯಾ ದತ್ತಂ ವರಂ ಭಾರಾಯ ಮೇ ಭವೇತ್" (ಎಲೈ ಶಿವನೇ, ತ್ವಯಾ—ನಿನ್ನಿಂದ, ದೋಸ್ಸಹಸ್ರಂ—ಸಾಸಿರ ತೋಳ್ಗಳು, ದತ್ತಂ—ಕೊಡಲ್ಪಟ್ಟುವು,

ಮೇ–ಎನಗೆ, ವರಂ–ವರವು, ಭಾರಾಯ–ಭಾರಕ್ಕೋಸುಗ, ಭವೇತ್– ಅಹುದು.) ತನ್ನ ಭಕ್ತರ ಗರ್ವಮಂ ತಾನೆ ಪರಿಹರಿಸದೆ ಅನ್ಯರಿಂ ಪರಿಹರಿಸಿದನಾಗಿ; ವಿಷ್ಣುವಿನಂತೆ ದಾನಮಂ ಕೊಟ್ಟ ಬಲಿಚಕ್ರವ ರ್ತಿಯಂ, ವಜ್ರ ಕವಚಮಂ ಕೊಟ್ಟ ಕರ್ಣನಂ, ಕೊಂದುಬಿಡುವುದು ನೀಚರ ಗುಣಂ.

ಅಂತುಮಲ್ಲದೆ ಮುಂದೆ ಭೈರವನ ಜನನಕ್ಕೆ ಕಾರಣಮುಂಟೆಂದು ವಿಷ್ಣುವಂ ಮೋಹಿಸಿ ನಿರೂಪಿಸಿ ಕಳುಹಲಾಗಿ ಉಪಾಯತಂತ್ರದಿಂದ ಅಸುರನಂ ಕೊಂದು ಬರಲವಳಂ ನೆರೆಯಲು ಭೈರವಂ ಜನಿಯಿಸಿದಂ. ಸ್ಕಾಂದಪುರಾಣೇ— "ನಾರಾಯಣೀಂ ಸಮಾಲಿಂಗ್ಯ ಭುಜಾಭ್ಯಾಂ ಸಾಧು ಸಾಧ್ವಿತಿ । ಭೈರವಂ ಜನಯಾಮಾಸ ಕಾಪಾಲಿಕಮತೇಶ್ವರಂ" (ಭುಜಾ ಭ್ಯಾಂ–ಭುಜಂಗಳತ್ತಣಿಂದೆ, ನಾರಾಯಣೀಂ–ಸ್ತ್ರೀರೂಪನಾಂತ ವಿ ಷ್ಣುವನ್ನು ಸಮಾಲಿಂಗ್ಯ–ಚೆನ್ನಾಗಿ ಆಲಂಗಿಸಿಕೊಂಡು, ಸಾಧುಸಾಧ್ವಿತಿ– ಲೇಸುಲೇಸೆಂದು ಕೊಂಡಾಡುತಿರಲಾಗಿ, ಕಾಪಾಲಿಕಮತೇಶ್ವರಂ—ಕಾಪಾ ಲಿಕಮತಕ್ಕೆ ಒಡೆಯನಾದ, ಭೈರವಂ–ಭೈರವನನ್ನು, ಜನಯಾಮಾಸ– ಹುಟ್ಟಿಸಿದನು, "ಭೀರೋರಪತ್ಯಂ ಪುಮಾನ್ ಭೈರವಃ" ಭೀರುರುದ್ರನ ಮಗನಾದ ಕಾರಣ ಭೈರವನೆಂದು ಹೆಸರಾಯಿತು.)

ಮತ್ತಂ ಈಶ್ವರಂ ವರವಿತ್ತವರಂ ವಿಷ್ಣು ಸಂಹಾರಂಮಾಡಿ ದಂ; ವಿಷ್ಣು ವರವಿತ್ತವರನೀಶ್ವರಂ ಸಂಹರಿಸಲಿಲ್ಲವೆಂದು ಕೆಲಂಬರ ಜ್ಞಾನಿಗಳಾಡುವರ್. ರಾವಣಾಸುರ ಬಾಣಾಸುರ ಮೊದಲಾದವರಿಗೆ ಅವರವರ ತಪಸ್ಸಿನ ಫಲಪ್ರಾಪ್ತಿಗಳನರಿತು ಕಿಂಚಿದ್ಭೋಗಂಗಳಂ ಕೊಟ್ಟು ತಾನಿತ್ತ ಫಲಪ್ರಾಪ್ತಿಗಳು ತೀರುವಂದಿಂಗೆ ತಾನೆ ಕೊಲಲಾ ಗದೆಂದು ತನ್ನ ಭೃತ್ಯನಾದ ವಿಷ್ಣುವಿಂ ಕೊಲಿಸುತ್ತಲಿಹಂ. ನಿತ್ಯಪದಂ ಗಳಂ ರಾಕ್ಷಸರಿಗೆ ಕೊಡಲಿಲ್ಲಾಗಿ ಹದಿನಾರು ವರುಷದಾಯುವಂ ಪಡೆದಿರ್ದ ಮಾರ್ಕಂಡೇಯಂಗೆ ಕಾಲಮೃತ್ಯುವಂ ಕಡೆನೂಂಕಿ ನಿತ್ಯಪದ ಮಂ ಪರಮೇಶ್ವರನಿತ್ತಲ್ಲಿ ಅಡ್ಡಲಾದವರಾರುಂ ಇಲ್ಲವಾಗಿ ಈಶ್ವರನಿತ್ತ ವರಕ್ಕೆ ಕೇಡಿಲ್ಲವೆಂದರಿವುದು.

ವಿಷ್ಣುವು ವಿಭೀಷಣ ಧ್ರುವ ಮೊದಲಾದವರ್ಗೆ ನಿತ್ಯಪದಂಗಳನಿತ್ತನೆಂದು ಮಾಯಾಮೋಹಿತರಾಡುವರ್. ಅಂತಪ್ಪ ವಿಷ್ಣುವಂ ಧ್ರುವ ವಿಭೀಷಣ ಮೊದಲಾದವರಂ ಮಹಾದೇವನು ತನ್ನ ವಹ್ನಿನೇತ್ರದಿಂದೆ ಪ್ರಳಯಕಾಲದಲ್ಲಿ ದಹಿಸಿ ಬಿಟ್ಟಾಗ ವಿಷ್ಣುವಿತ್ತ ವರವೇನಾಯ್ತು? ವಿಷ್ಣುವೇನಾದನೆಂದಱಿಯದೆ "ನಮೋ ವಿಷ್ಣು ಕಳತ್ರಾಯ" ಎಂದು ಪದ್ಮಪುರಾಣದಲ್ಲಿ (ವಿಷ್ಣುಕಳತ್ರಾಯ—ವಿಷ್ಣುವೇ ಹೆಂಡತಿಯಾಗುಳ್ಳವನಿಗೋಸುಗ, ನಮಃ—ನಮಸ್ಕಾರವು) ಎಂದುದಾಗಿ, "ಏಕ ಏವ ರುದ್ರೋ ನದ್ವಿತೀಯಾಯ ತಸ್ಥೇ ನ ಬ್ರಹ್ಮಾ ನಚವಿಷ್ಣುಃ" ಎಂದು ಜಾಬಾಲಿಶಾಖೆಯಲ್ಲಿ ಪೇೞುತ್ತಾಗಿ, ಕೊಡಲುಂ ತೆಗೆಯಲುಂ ಶಿವನೊರ್ವನೆ ಅಲ್ಲದೆ ಸತ್ತು ಹುಟ್ಟುವ ಜೀವರ್ಗೆ ಕಾರಣವಿಲ್ಲವೆಂಬುದೀಸೂತದ ಬಹುಶಬ್ದನಿರ್ವಚನಾರ್ಥಂ. ॥೧೨॥

ಪದ ॥ ಹರಿ ದೈವವಲ್ಲವೆಂಬುದಕೆ ದೃಷ್ಟಾಂತವಂ ।
ಪರಿಕಿಸು ಋಗ್ವೇದದ ಲಿಂಗಸೂಕ್ತಿಯು ।
ತ್ಕರವಾಗಿ ಯುದ್ಧೇಸಂಯುಕ್ತಾವುಭೌಚ ಯೆಂ ।
ದಿರದೆ ದೃಷ್ಟ್ವಾ ಬ್ರಹ್ಮವಿಷ್ಣೂರಜಸಾ ।
ಕರಪಂತೆ ಬದ್ಧವೈರೌ ಮಧ್ಯೇ ತಯೋಃ ।
ಸರಸೋಕ್ತಿಯಿಂ ದೃಶ್ಯತೇ ಜಾತವೇದಾ ಸ್ಥಿ ।
ಣುರುದತಿಷ್ಠದ್ಭುವನಸ್ಯ ಗೋಪ್ತಾಯೆನೆ ।
ಭರದೆ ಸ್ಥಾಣುರುದ್ರ ಉಮಾಪತಿ ಯೆಂದ ।
ಮರವಾಕ್ಯವುಂಟಾಗಿ ವಿಷ್ಣುಬ್ರಹ್ಮರು ಮುನ್ನ ।
ಪರವು ಅಜ್ಞಾನದಿಂ ಪೆರ್ಚುಕುಂದಿಗೆ ಪೋರ್ದು ।
ಹರನ ನಿಜವ ಮಱೆದತಿಯುದ್ಧವೆಸಗಲು ।
ಧರೆ ನಷ್ಟವಾಗಿ ಪೋಗುತ್ತಿರಲಾಗ ಶಂ ।
ಕರನವರಿರ್ವರ ಮಧ್ಯದೊಳ್ಜ್ವಾಲಾಪ್ರ ।
ಸ್ಫುರಿತರೂಪಾಂತಖಂಡಜ್ಯೋತಿಯಾಗಿ ನಿಂ ।
ದಿರೆ ಭಯದಿಂ ಹರಿಬ್ರಹ್ಮರೀಮಹಿಮನ ।
ಚರಣಮಸ್ತಕಗಳ ಕಂಡು ಬಂದವರೀಗ ।
ಪರಮಬೊಮ್ಮವೆನೆ ಸೂಕರನಾಗಿ ವಿಷ್ಣುಸಂ ।

ಚರಿಸಿದನತಳಾದಿಕೆಳಗೇಟು ಲೋಕವಮಂ ।
ಗಿರಿಶನ ಪದವ ಕಾಣದೆ ಯಥಾಸ್ಥಾನಕ್ಕೆ ।
ಮರಳಿ ಬಂದಿರೆ ವಿಧಿ ಗೃಧ್ರರೂಪಾಂತು ಯೀ ।
ಶ್ವರನ ಮಸ್ತಕವ ನೋಡಲ್ಪೋಗಿ ಬಹುಕಾಲ ।
ತಿರಿಗಿ ಕಾಣದೆ ಕೇತಕಿಯ ದುಸ್ಸಾಕ್ಷಿಯಂ ।
ನರಲೋಕದಲ್ಲಿಯಪೂಜ್ಯವಾಗಲಿಯೆಂದ ।
ಸುರರಿಪುವಿತ್ತನವರಿಗೆ ಶಾಪವನಾಗ ।
ಳುರುಲಿಂಗರೂಪಾಂತ ಶಿವನ ಸ್ತೋತ್ರವ ಮಾಡಿ ।
ಕರುಣವಮಂ ಪಡೆದವರಿರ್ವರು ಪೋದರೀ ।
ಪರಿಯನು ಋಗ್ವೇದದಲ್ಲಿ ಪೇಳ್ವುದು ಮತ್ತೆ ।
ಹರುಷದಿಂದಗ್ನಿ ವೀಳೆಯೆಂದಾ ಲಿಂಗವ ।
ನರರೆ ನುತಿಸೆ ವೇದವು ಸ್ಕಂಧಾದಿಗ ।
ಳೊರೆವಾವುಪಬ್ರಹ್ಮಣವು ಕಾಣಿಸುತಿರೆ ।
ಸಿರಿಯಾಣ್ಮನಂ ದೈವವೆಂಬುದು ಪುಸಿ ।
ನರಕಭಾಜನರಲ್ತೆ ನೀವು ವಾದಿಗಳಿರ ।
ಮರುಳಾಗದಿರಿ ತಿಳಿಯದು ಶಿವನಿಜವು ॥೧೪॥

"ಯುದ್ಧೇಸಂಯುಕ್ತಾವುಭೌಚ ದೃಷ್ಟ್ವಾ ಬ್ರಹ್ಮವಿಷ್ಣೂ ರಜಸಾ ಬದ್ಧವೈರೌ ಮಧ್ಯೇ ತಯೋರ್ದೃಶ್ಯತೇ ಜಾತವೇದಾಸ್ಥಾಣುರುದತಿಷ್ಠದ್ಭುವನಸ್ಯಗೋಪ್ತಾ" (ರಜಸಾ-ರಜೋಗುಣದಿಂದೆ, ಬದ್ಧವೈರೌ-ಕಟ್ಟಲ್ಪಟ್ಟ ವೈರಂಗಳನುಳ್ಳ, ಯುದ್ಧೇ-ಯುದ್ಧದೊಡನೆ, ಸಂಯುಕ್ತೌ-ಕೂಡಿದವರಾದ, ಉಭೌಚ-ಇರ್ವರಾದ, ಬ್ರಹ್ಮವಿಷ್ಣೂ-ಬ್ರಹ್ಮವಿಷ್ಣುಗಳನ್ನು ದೃಷ್ಟ್ವಾ-ನೋಡಿ, ತಯೋಃ-ಆ ಬ್ರಹ್ಮವಿಷ್ಣುಗಳ, ಮಧ್ಯೇ-ಮಧ್ಯದಲ್ಲಿ, ಭುವನಸ್ಯ-ಲೋಕಕ್ಕೆ, ಗೋಪ್ತಾ-ರಕ್ಷಕನಾದ, ಜಾತವೇದಾಃ-ಮಹದಗ್ನಿ ರೂಪನಾದ, ಸ್ಥಾಣುಃ-ರುದ್ರನು, ಉದತಿಷ್ಠತ್-ಉದ್ಭವಿಸಿದವನಾಗಿ, ದೃಶ್ಯತೇ-ಕಾಣುತ್ತಲಿಹನು.)

"ವರಾಹೋವಿಷ್ಣುರ್ನಿಮಮಜ್ಜ ಭೂಮೌ ಬ್ರಹ್ಮೋತ್ಪಪಾತ ದಿವಮಾಶು ಗೃಧ್ರಃ॥" (ವಿಷ್ಣುಃ-ನಾರಾಯಣನು, ವರಾಹಃ-ಹಂದಿಯಾಗಿ, ಭೂಮೌ-ಭೂಮಿಯಲ್ಲಿ, ನಿಮಮಜ್ಜ-ಮುಳುಗಿದನು. ಬ್ರಹ್ಮಾ-

ಬ್ರಹ್ಮನು, ದಿವಂ—ಆಕಾಶವನ್ನು, ಆಶು—ಶೀಘ್ರದಲ್ಲಿ, ಗೃಧ್ರಃ—ಹದ್ದಾಗಿ, ಉತ್ಪಪಾತ—ನೆಗೆದನು.) ಇಂತೆಂದು ಋಗ್ವೇದಂ ಪೇಳುತ್ತಾಗಿ; "ಸ್ಥಾಣುರುದ್ರ ಉಮಾಪತಿಃ" ಎಂದು ನಿಘಂಟುಪ್ರಸಿದ್ಧವಾಗಿ ಸ್ಥಾಣು ಶಬ್ದವಾಚ್ಯನಾದ ರುದ್ರನೆ ಆದಿಮಧ್ಯಾಂತರಹಿತನು, ವಿಷ್ಣುಬ್ರಹ್ಮರಿಂದುಪಾಸ್ಯನೆಂದಱಿವುದು.

"ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಥಿತಃ" (ಕಣ್ಗೆ ಗೋಚರವಾಗಿಯುಂ ಕಿವಿಯಿಂದೆ ಕೇಳಿಪಟ್ಟವಾಗಿಯುಂ ಸ್ಥೂಲಸೂಕ್ಷ್ಮರೂಪಿನಿಂದಾವಾವ ಲೋಕಂಗಳುಂಟು ಅವನೆಲ್ಲಂ ಒಳಹೊಱಗೆ ನಾರಾಯಣನೇ ವ್ಯಾಪಿಸಿಹನು.) ಎಂಬ ನಾರಾಯಣೋಪನಿಷದ್ವಾಕ್ಯಂ ಮೊದಲಾದುವುಂ, "ನಾರಾಯಣಪರಂ ಬ್ರಹ್ಮ ತತ್ತ್ವಂ ನಾರಾಯಣಂ ಹರಿಃ" ಎಂಬ ಮಹೋಪನಿಷದ್ವಾಕ್ಯಂ ಮೊದಲಾದುವುಂ, "ಅಂತಶ್ಶರೀರೇ ನಿಹತೋ ಗುಹಾಯಾಂ" ಎಂಬುದು ಮೊದಲಾಗಿ "ಏಷಃ ಸರ್ವಭೂತಾಂತರಾತ್ಮಾಪಹತಪಾಪ್ಮಾ ದಿವ್ಯೋ ದೇವ ಏಕೋನಾರಾಯಣಃ" ಎಂಬಿವು ಮೊದಲಾದ ವಾಕ್ಯಂಗಳ್ಗೆಯುಂ ಈತನೇ ಸಮಸ್ತ ಜೀವರ ದೇಹವೆಂಬ ಗುಹೆಯುಳ್ಳಿರ್ಪಹನು, ಈ ನಾರಾಯಣನೆ ಸರ್ವಪ್ರಾಣಿಗಳ ಅಂತರಾತ್ಮನೆಂದು ಪೇಳುದುದಾಗಿ; ಮತ್ತಂ ಬ್ರಹ್ಮೋಪನಿಷತ್ತು ಮೊದಲಾದುವಲ್ಲಿ— "ಸದಾಶಿವ ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವಭೂತಾಂತರಾತ್ಮಾ" ಎಂದು ಪೇಳುದುದಾಗಿ; ಮತ್ತಂ "ಯೋ ರುದ್ರೋ ಅಗ್ನೌ ಯೋ ಅಪ್ಸು ಯ ಓಷಧೀಷು ಯೋರುದ್ರೋ ವಿಶ್ವಾಭುವನಾವಿವೇಶ" ಮತ್ತಂ "ಋತಂ ಸತ್ಯಂ ಪರಂ ಬ್ರಹ್ಮ" ಎಂಬಿವುಮೊದಲಾದ ವಾಕ್ಯಂಗಳ್ಗೆಯುಂ ಹಿಂದೆ ಹೇಳಿದ ವಿಷ್ಣುವೇ ಸರ್ವವ್ಯಾಪಕನು, ವಿಷ್ಣುವೇ ಪರಬ್ರಹ್ಮ, ವಿಷ್ಣುವೇ ಸರ್ವಭೂತಾಂತರಾತ್ಮ, ಎಂಬ ವಾಕ್ಯಂಗಳ್ಗೆಯುಂ ರುದ್ರನೇ ಸರ್ವವ್ಯಾಪಕನು, ರುದ್ರನೇ ಸರ್ವಭೂತಾಂತರಾತ್ಮನು ಎಂಬ ವಾಕ್ಯಂಗಳ್ಗೆಯುಂ ನಿಶ್ಚಯವಾವುದೆಂದು ಸಂದೇಹಂ ಪುಟ್ಟುತಿರಲಾಗಿ; ಆ ವೇದಪುರುಷನೆ ಪರಿಹರಿಸುತಿರ್ದಪಂ.

ಅದೇ ಋಗ್ವೇದದಲ್ಲಿ ಈಶ್ವರನ ಪಾದಮಸ್ತಕಂಗಳನು ಹರಿ ಬ್ರಹ್ಮರು ಕಾಣಲಾರದೆ ಹೋದರು, ಎಂಬೊಡೆ—ವಿಷ್ಣುವೇ ಸರ್ವವ್ಯಾಪಕನೆಂದು ಹಿಂದೆ ಹೇಳಿದ ಶ್ರುತಿಗೆ ತದಂತರ್ಯಾಮಿ ಈಶ್ವರನೆಂದು ನಿಶ್ಚಯಿಸಲ್ಪಟ್ಟಿತು; ನಾರಾಯಣನೆ ಪರಬ್ರಹ್ಮ, ರುದ್ರನೇ ಪರಬ್ರಹ್ಮವೆಂಬ ಹೇಳಿದ ವಾಕ್ಯಂಗಳ್ಗೆ ಯುಂ ಸಂದೇಹಂ ಪುಟ್ಟುತಿರಲಾಗಿ, ಅದೇ ಯಜುರ್ವೇದದಲ್ಲಿ "ತ್ರಿಯಂಬಕೊಂಬಕೋನಾಮ ರುದ್ರೋನಾರಾಯಣಶಿರಶ್ಛಿಂಚುನಾ ಚಕರ್ತ" ಎಂಬುದಾಗಿ ನಾರಾಯಣವಾಚಿಯಾಗಿ ಪೇಳಿದ ವಾಕ್ಯವು ತದಂತರ್ಯಾಮಿಯಾದ ರುದ್ರಪರವೆಂದೇ ಅರಿಯಲ್ಪಟ್ಟಿತು. ನಾರಾಯಣನೋ ಸರ್ವಭೂತಾಂತರಾತ್ಮನು, ಈಶ್ವರನೋ ಸರ್ವಭೂತಾಂತರಾತ್ಮನು ಎಂದು ಸಂದೇಹಂ ಪುಟ್ಟುತಿರಲಾಗಿ, ಅದೇ ಮಹೋಪನಿಷತ್ತಿನಲ್ಲಿ "ತಸ್ಯಾಶ್ಶಿಖಾಯಾಮಧ್ಯೇ ಪರಮಾತ್ಮಾ ವ್ಯವಸ್ಥಿತಃ" ಎಂದುದಾಗಿ, ರುದ್ರನೇ ಅಂತರ್ಯಾಮಿಯೆಂದು ನಿಶ್ಚಯಿಸಲ್ಪಟ್ಟಿತು.

"ನಮೋವಃಕಿರಿಕೇಭ್ಯೋ ದೇವಾನಾಂ ಹೃದಯೇಭ್ಯೋ" ಎಂಬ ಶತರುದ್ರೀಯವಾಕ್ಯಮುಂಟಾಗಿ ಸಮಸ್ತ ವೇದಾಂತವೇದ್ಯನು ಈಶ್ವರನೆಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ ॥೧೪॥

ಪದ ॥ ನಗರೀಶಾನ್ಯದಿಕ್ಕಿನೊಳು ಶಿವಾಲಯಂ ।
ನಗರಿಮಧ್ಯದೊಳು ವಿಷ್ಣುಸ್ಥಾನವೆಂದು ಶಾ ।
ಸ್ತ್ರಗಳು ಪೇಳ್ವುವು ತತ್ಕಾರಣದೆ ಮಹೇಶನು ।
ಧಿಗಧೀಶರೊಳಗೊರ್ವನೆಂದಾಡುತಿರ್ಪರು ಭ್ರ ।
ಮೆಗೆ ನೆಲೆಯುಹರೆ ಕೇಳ ಕಶ್ಯಪಶಾಸ್ತ್ರದು ।
ಕ್ತಿಗಳು ಭುವಃ ಪಾಪಾ ಯಾತುಧಾನ ಎಂದು ।
ಮಿಗೆ ದಿಶೇಶಾನಂತು ತಚ್ಛರ ಎನುತೆ ತಾಂ ।
ಸೊಗಸಾಂತು ಮಸ್ತಕಾಂತೋ ಭುವೋ ರುದ್ರ ಎಂ ।
ದಗಲದೆ ಮಧ್ಯೇವಿಷ್ಣು ರಜಃಪದೆಯೆನೆ ।
ಜಗತಿಗೆ ನೈಋತ್ಯದಿಕ್ಕೆ ಪಾದಂಗಳು ।
ಮಿಗಗೈವನಿರ್ಪನೀಶಾನ್ಯವೆ ಮಸ್ತಕ ।
ಭಗದ ಸ್ಥಾನವೆ ಮಧ್ಯಸ್ಥಾನವೆಂದೆನಿಪುದು ।
ನಗಜೆಯುರಸಿನಿಪನಾಭಿರಸ್ಥಾನದೆ ।

ನಗಧರನಿಹನು ಭೂಮಿಗೆ ಮಧ್ಯದೇಶದೆ ।
ಪ್ರಗತವಾದನು ವಿಧಿಯುಂಘ್ರಿಪ್ರದೇಶಕೆ ।
ವಿಗಡವೇತಕೆ ಶಿಲ್ಪನಿರ್ಣಯವಿಂತಿರೆ ।
ಜಗದೊಳಾದುದು ಪುರಮಧ್ಯಸ್ಥಾನವು ವಿಷ್ಣು ।
ವಿಗೆ ಬೊಮ್ಮಂಗೆ ಕಾಲ್ವೆಸೆಯಾದುದು ಕೇಳು ।
ಮೃಗಧರಜೂಟಂಗೆ ಮೂರ್ಧಪ್ರದೇಶವೀ ।
ಬಗೆಯಿಂದಲಾಯ್ತು ಭುವ್ಯೋಘ್ರಾಣಸ್ಯಯೆಂ ।
ದಗಣಿತವಾದ ಯುಸ್ಸಂಧಿಯೆನಲು ಸ ।
ರ್ವಗನಾದ ರುದ್ರ ಭ್ರೂಮಧ್ಯನಿಲಯನು ದೇ ।
ಹಿಗಳಣುತೃಣಗಳ ಮಸ್ತಕವಾಗಿ ಭೂ ।
ಮಿಗೆ ಶಿರೋದೇಶಮಾದೀಶಾನದಿಕ್ಕಿನೊ ।
ಳಗೆ ಶಿವನಿರ್ಪುದಕ್ಕರಿಯೆ ತಾನೀಶಾನ್ಯ ।
ನಿಗೆ ಸಾರೂಪ್ಯವೆತ್ತಿಹ ದಿಶಾಧಿಪನವ ।
ನಿಗಮಗಳಿಂತು ಪೇಳ್ದುದನಱಿಯದೆ ಶಿ ।
ವಗನಿತ್ಯವೆಂದು ನೀನು ಕಲ್ಪಿಸುವೆ ಹ ।
ರಿಗೆ ಯೋನಿಸ್ಥಾನವನು ಅಧಿಕವೆಂದು ।
ಬಗೆವೆಚ್ಚರ್ಪತಿರ್ಪುದದನು ಬಿಡಿನ್ನು ಮಾ ।
ಯೆಗೆ ನೆಲೆ ವಿಷ್ಣುವೆ ತಾನೆಂಬುದಕ್ಕಿದೆ ।
ಮಿಗೆ ದೃಷ್ಟವಲ್ಲವೆ ಸಂದೇಹವೇನು ॥೧೫॥

ವಿಷ್ಣು ಪುರಮಧ್ಯದೊಳಿರ್ಪನು, ಈಶ್ವರನು ಹೊಱವಳಯ ದೊಳೀಶಾನ್ಯದಿಕ್ಕಿನೊಳಿರ್ಪನು; ಅದಱಿಂ ದಿಕ್ಪಾಲಕರೊಳೊರ್ವನೆಂ ದಾಡುವರಜ್ಞಾನಿಗಳ್.

ಕಶ್ಯಪಶಾಸ್ತ್ರದಲ್ಲಿ ಪೇಳ್ವುದು:— 'ಭುವಃಪಾದೌ ಯಾತು ಧಾನದಿಶೇಶಾನಂತು ತಚ್ಛಿರಃ । ಮಸ್ತಕಾಂತೋ ಭುವ್ಯೋ ರುದ್ರೋ: ಮಧ್ಯೇವಿಷ್ಣುರಜಃ ಪದೇ" (ಯಾತುಧಾನ—ನೈಋತ್ಯನ, ದಿಶಾ—ದಿ ಕ್ಕು, ಭುವಃ—ಭೂಮಿಗೆ, ಪಾದೌ—ಪಾದಂಗಳು; ಈಶಾನಂತು—ಈ ಶಾನದಿಕ್ಕು, ತತ್—ಆ ಭೂಮಿಗೆ, ಶಿರಃ—ಶಿರಸ್ಸು; ರುದ್ರಃ—ರುದ್ರನು, ಭುವಃ—ಭೂಮಿಯ, ಮಸ್ತಕಾಂತಃ—ಮಸ್ತಕದ ಅಗ್ರದಲ್ಲಿರ್ಪನು, ವಿಷ್ಣುಃ—ನಾರಾಯಣನು, ಮಧ್ಯೇ—ಭೂಮಿಯ ಮಧ್ಯಸ್ಥಾನದಲ್ಲಿ, ಇ

ರ್ಪನು, ಅಜಃ-ಬ್ರಹ್ಮನು, ಪಾದೇ—ಭೂಮಿಯ ಪಾದಸ್ಥಾನದಲ್ಲಿರ್ಪನು.) ಇಂತೆಂದು ಭೂಮಿಗೆ ಈಶಾನ್ಯದಿಕ್ಕೇ ಶಿರಸ್ಸು, ನೈಋತ್ಯದಿಕ್ಕೇ ಪಾದಂಗಳು, ಯೋನಿಸ್ಥಾನವೇ ಮಧ್ಯಸ್ಥಾನವೆಂಬ ನಿರ್ಣಯಮಿರಲಾಗಿ ಭೂಮಿಯ ಮಸ್ತಕಾಂತನಾಗಿ ರುದ್ರನಿರ್ಪನು, ಮಧ್ಯಸ್ಥಾನದಲ್ಲಿ ವಿಷ್ಣುವಿರ್ಪನು, ಪಾದದ ದಿಕ್ಕಿನಲ್ಲಿ ಬ್ರಹ್ಮನಿರ್ಪನದಱಿಂ ಪುರಮಧ್ಯಸ್ಥಾನಂ ವಿಷ್ಣುವಿಂಗಾಯಿತ್ತು, ಶಿರೋದೇಶಂ ರುದ್ರಂಗಾಯಿತ್ತು.

ಮತ್ತಂ ಪೂರ್ವತಾಪನೀಯದ ಅನುಷ್ಟುಭಕಲ್ಪದಲ್ಲಿ– "ಆನಾಭೇಃ ಬ್ರಹ್ಮಣೋ ರೂಪಮಾಗಳಾದ್ವೈಷ್ಣವಂ ಪರಂ । ಆಮೂರ್ಧ್ನೋ ರುದ್ರರೂಪಂ ಸ್ಯಾತ್ತದಗ್ರೇ ಸರ್ವತಶ್ಶಿವಃ"(ಆನಾಭೇಃ–ನಾಭಿಪರ್ಯಂತರವು, ಬ್ರಹ್ಮಣಃ–ಬ್ರಹ್ಮನ, ರೂಪಂ–ರೂಪವು, ಆಗಳಾತ್—ಕಂಠಪರ್ಯಂತರವು, ಪರಂ–ಉತ್ಕೃಷ್ಟವಾಗೆ, ವೈಷ್ಣವಂ-ವಿಷ್ಣುರೂಪವು, ಆಮೂರ್ಧ್ನಃ–ಮಸ್ತಕಪರ್ಯಂತರವು, ರುದ್ರರೂಪಂ-ರುದ್ರರೂಪವು, ಸ್ಯಾತ್—ಅಹುದು; ತದಗ್ರೇ—ದ್ವಾದಶಾಂಗುಲಪ್ರಮಾಣದಲ್ಲಿ, ಸರ್ವತಃ–ಎಲ್ಲಾ ಕಡೆಯಲ್ಲಿಯೂ, ಶಿವಃ—ಶಿವನಿರ್ಪನು.) ಇಂತೆಂದು ಸಮಸ್ತ ಪ್ರಾಣಿಗಳ ಮಸ್ತಕಾಂತದಲ್ಲಿ ಶಿವನಿರ್ಪನಾಗಿ ಭೂಮಿಯ ಮಸ್ತಕಾಂತದಲ್ಲಿ ಶಿವನಿರ್ಪುದು ಅಚ್ಚರಿಯಲ್ತು.

ಹಾಂಗೆ ಲಘುಜಾಬಾಲೋಪನಿಷತ್ತಿನಲ್ಲಿ– "ಭ್ರುವೋರ್ಘ್ರಾಣಸ್ಯ ಯಸ್ಸಂಧಿಃ ಸ ಏಷ ದ್ಯೌ ಪರಸ್ಯ ಸಂಧಿಃ"(ಭ್ರೂವೋಃ—ಹುಬ್ಬುಗಳ, ಘ್ರಾಣಸ್ಯ—ಮೂಗಿನ, ಯಃ—ಆವುದಾನೊಂದು, ಸಂಧಿಃ–ಸ್ಥಾನವುಂಟು, ಸ ಏಷಃ–ಆಸ್ಥಾನವು, ದ್ಯೌ–ಸ್ವರ್ಗಲೋಕದ, ಪರಸ್ಯ—ಶಿವಲೋಕದ, ಸಂಧಿಃ–ಸ್ಥಾನವು.)

"ಭ್ರೂಘ್ರಾಣಮಧ್ಯೇತ್ವವಿಮುಕ್ತದೇಶೇ ವಿಶ್ವೇಶ್ವರಾಖ್ಯಂ ಪರಮಾತ್ಮಲಿಂಗಂ" ಎಂಬ ಶಾಂಕರಸಂಹಿತಾವಾಕ್ಯಮುಂಟಾಗಿ ಸರ್ವಪ್ರಾಣಿಗಳ ಭ್ರೂಘ್ರಾಣಮಧ್ಯದಲ್ಲಿ ಈಶ್ವರನಿರ್ಪನೆಂಬುದಾಗಿ ಮಹಾದೇವನು ಮಧ್ಯಪ್ರದೇಶದಲ್ಲಿ ಇರಲಿಲ್ಲವಾಗಿ ಸರ್ವಸ್ಥಾನೋತ್ಕೃಷ್ಟನೀಶ್ವರನೆಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ. ॥೧೫॥

ಪದ ॥ ಮಾರಹರನು ಯೋನಿಲಿಂಗಪ್ರಕಾರದಿಂ ।
ದೀರಸೆಯುಲ್ಲಿ ಪೂಜೆಯನಾಂತನೆಂದು ನೀ ।
ನಾರಯ್ಯದೊಱಲುವುದನ-ಚಿತ ಕೇಳಲೊ ।
ಶ್ರೀರಮಣನೆ ಯೋನಿಯುವ ಮಾಯಾರೂಪನು ।
ಗೌರೀಶನವಳ ಸಂಯೋಗದಿಂದಿರ್ಪಂತೆ ।
ತೋಱುವನದಕೆ ಕಾಶ್ಯಪಶಿಲ್ಪಶಾಸ್ತ್ರದೊಳು ।
ನಾರಾಯಣಮುಖಾಲೇಖಾನಿಖಿಲಾಯೆಂ ।
ದೋರಂತೆ ಶಕ್ತಿಲಿಂಗಜಾಯೆನೆ ಕೇಳತ್ತೆ ।
ಮೂಱುಗುಣಂಗಳನಡಿಮೆಟ್ಟಿ ನಿಂದ ವಿ ।
ಚಾರಮನಱಿಯದೆ ನುಡಿವರಜ್ಞರು ನೋಡೆ ।
ಕ್ರೂರತ್ರೈಗಣಗಳು ಮಾಯಾಧೀನದಿಂ ।
ತಾರಕಬ್ರಹ್ಮಮಾದುದಱಿಂದ ಮಿೀಱಿಹಂ ।
ಸಾರಯಜುರ್ವೇದದೊಳೆಂದುದು ನಮ ।
ಸ್ತಾರಾಯಚ ನಮಶ್ಯಂಭವೇಚ ಎಂದು ।
ಶೌರಿಯಂ ವಿಶ್ವಂ ನಾರಾಯಣಂ ಹರಿಮೆನೆ ।
ಕಾರಣಾತ್ಮಕನಿಗೆ ವಿಶ್ವಮೆ ಪೀಠಮೆಂ ।
ದೀರೀತಿಯಿಂದುಸಿರ್ದಪುವು ಪುರಾಣೋಕ್ತಿ ।
ಭೋರೆನಾಕಾಶಂ ಲಿಂಗಮಿತ್ಯಾಹುರ ।
ನಾರತಂ ಪೃಥ್ವೀತಸ್ಯಾದಿಪೀಠಿಕಾ ಯೆನೆ ।
ವೈರಮಂ ಬಿಡು ಹರಿಯೆ ಪೀಠಮಾದನ ।
ಕಾರವುಕಾರಮಕಾರಾತೀತನೋಂ ।
ಕಾರತುರೀಯನೆ ಲಿಂಗರೂಪನು ಭವ ।
ದೂರಗೆ ಯೋನಿಸಂಯೋಗಮುಂಟೆಂಬುದು ।
ನಾರಕಾತ್ಮರಬುದ್ಧಿ ತನ್ನಿದು ಮನದ ವಿ ।
ಕಾರಮಿರ್ದಂತೆ ತೋಱುವನಥರ್ವದೆ ಬ್ರಹ್ಮ ।
ಚಾರಿಣಿ ಚಂದ್ರಲಲಾಟಾಭುಎನೆ ನಿರಾ ।
ಕಾರಪರಬ್ರಹ್ಮಕೆ ಯೂರ್ಧ್ವರೇತಸ್ಸ ।
ಧೋರೇತಸ್ಸೆಂದೆಂಬುವಿಲ್ಲ ಜೇವನಿಙ್ಞೆ ।
ತೋಱಿದಂತಾವಿರ್ಭವಿಸಿ ಸುಖಮನೀವ ।
ಸಾರಾಜಧರನ ಖಂಡಬ್ರಹ್ಮಮದಱ ಸಾ ।

ಕಾರದ ಮುಖ ಮೊದಲಿಲ್ಲದ ಲಿಂಗವು ।
ಸಾರಮಹಿಮರಿಂತಱಿವರು ವಿಶ್ವಕ್ಕಾ ।
ಧಾರವಾಗಿರ್ಪುದ ತಿಳಿಯದ ತೆಱದೆ ವಿ ।
ಕಾರದ ಯೋಚನೆಗಳನು ಮಾಳ್ಪುದು ಮಹಾ ।
ರೌರವಕೀಡು ತಾನೆಯೆ ಹರಬ್ರಹ್ಮ ।
ರಾರವ್ಯಲಿಂಗವನು ಪೂಜಿಸಿದರ ।
ಘೋರಣೇಯರ್ಗೆ ಮಹತೋಮಹೀಯನೆಂಬುದಂ ॥೧೬॥

ಮಹಾದೇವನು ಯೋನಿಲಿಂಗಪ್ರಕಾರದಿಂ ಪೂಜೆಗೊಂಬನೆಂಮ ಭೃಗುಮುನಿಯಿತ್ತ ಶಾಪವಶಮೆಂದು ಶಿವಂಗೆನಿಂದೆಯನಾಡುವರ್.

ನಿಮ್ಮ ಭಾಗವತಪುರಾಣದಲ್ಲಿಯೆ ದಕ್ಷಾಧ್ವರದಲ್ಲಿ ಭೃಗುವಿನ ಗಡ್ಡಮೀಸೆಗಳ್ ವೀರಭದ್ರೇಶ್ವರನಿಂ ಕೀಳಲ್ಪಟ್ಟತೆಂದು ಪೇೞಿತ್ತಾಗಿ, ಅಂದಿನ ಶಾಪಾನುಗ್ರಹಸಮರ್ಥತೆ ಇಂದಿಲ್ಲವಾಗಿ ಅಂತುಸಿರ್ವ ಪುರಾಣಂ ತಾಮಸಮೆಂದಱಿವುದು; ವಿಷ್ಣುವಿಂಗೆ ಭೃಗು ಶಾಪವಿತ್ತಂದು ಭೃಗುವಿಂಗೆ ನಿಗ್ರಹಂ ಪೇೞಲ್ಪಟ್ಟುದಿಲ್ಲಾಗಿ ಯಥಾರ್ಥವೆಂದಱಿವುದು. ಮತ್ತಂ "ನಾರಾಯಣಮುಖಾಲೇಖಾ ನಿಖಿಲಾಶ್ಶಕ್ತಿಲಿಂಗಜಾಃ'' ಎಂಮ ಕಾಶ್ಯಪಶಿಲ್ಪಿಶಾಸ್ತ್ರದೊಳ್ ಪೇೞಿತ್ತಾಗಿ, (ನಾರಾಯಣಮುಖಾಃ—ನಾರಾಯಣನೆ ಮೊದಲಾದ, ನಿಖಿಲಾಃ—ಸಮಸ್ತರಾದ, ಲೇಖಾಃ—ದೇವತೆಗಳೆಲ್ಲರೂ, ಶಕ್ತಿಲಿಂಗಜಾಃ—ಆ ಮಹಾಲಿಂಗಕ್ಕೆ ಪೀಠವಾದ ಶಕ್ತಿಲಿಂಗದತ್ತಣಿನುದ್ಭವಿಸಿದರು.) ಶಿವಶಕ್ತಿಯೇ ವಿಷ್ಣುವೆಂದು ಪೇೞಿತ್ತಾಗಿ, ವಿಷ್ಣುವೇ ಪೀಠಮೆಂದಱಿವುದು. ಪುರುಷರೂಪಂದಾಳ್ದಂದು ಶ್ರೀ ಶಕ್ತಿಯಿಂದೆ ತಾನುದ್ಭವಿಸಿದಂತೆ ತೋರ್ಪನು, ಉಳಿವೆಡೆಯೊಳಾಶಕ್ತಿಯೇ ತಾನೆಂದಱಿವುದು. ಸತ್ವರಜಸ್ತಮೋಗುಣಂಗಳು ಮಾಯಾಧೀನಮಾದುದಱಿಂದಂತಪ್ಪ ಮಾಯೆಯನತಿಕ್ರಮಿಸಿದುದರ್ಕೆ ದೃಷ್ಟಾಂತಮಾಗಿ ಯಾಶಕ್ತಿಪೀಠವನಡಿಮೆಟ್ಟತ್ತಾಗಿ "ಶಿವಮದ್ವೈತಂ ಚತುರ್ಥಂ ಮನ್ಯಂತೇ'' ಎಂದು ತ್ರಿಮೂರ್ತಿಗಳತ್ತಣಿಂದೆ ನಾಲ್ಕನೆಯವನೆಂದಱಿವುದು. ಅದುಕಾರಣದಿಂ ಯಜುರ್ವೇದದಲ್ಲಿ " ನಮಸ್ತಾರಾಯ ಚ ನಮಃ ಶಂಭವೇ ಚ '' (ಸರ್ವಮನತಿಕ್ರಮಿಸಿದ ತಾರಕಬ್ರಹ್ಮವಾದ ನಿನಗೋಸ್ಕರ ನಮಸ್ಕಾರವು.) ಎಂದು ನುತಿಸಲ್ಪಟ್ಟತು.

ಮತ್ತಂ "ವಿಶ್ವಂ ನಾರಾಯಣಂ ಹರಿಂ" ಎಂದು ವಿಶ್ವವೆ ನಾರಾಯಣನೆಂದು ಪೇಳಿತ್ತಾಗಿ "ಆಕಾಶಂ ಲಿಂಗಮಿತ್ಯಾಹುಃ ಪೃಥ್ವೀ ತಸ್ಯಾದಿಪೀಠಿಕಾ" (ಆಕಾಶಂ—ಆಕಾಶವು, ಲಿಂಗಮಿತಿ—ಲಿಂಗವೆಂದು, ಆಹುಃ—ಹೇಳುವರು. ಪೃಥ್ವೀ—ಆ ವಿಶ್ವಮನೊಳಕೊಂಡಿರ್ಪ ಭೂಮಿಯು, ತಸ್ಯ—ಆಲಿಂಗಮೂರ್ತಿಗೆ, ಆದಿಪೀಠಿಕಾ—ಆದಿಪೀಠವು.) ಇಂತೆಂದುದಾಗಿ ಆ ವಿಷ್ಣುವೇ ಪೀಠವೆಂದಱಿವುದು.

ಅಂತೆಪ್ಪ ಮಹದಾಕಾಶಲಿಂಗಮೂರ್ತಿಗೆ ಯೋನಿಸಂಗವೆಂಬುದೆಂದುಮಿಲ್ಲವಾಗಿ ಯಜುರ್ವೇದದಲ್ಲಿ— "ಸೋಭ್ಯಾಯಚ ಪುರುಷಾಯ ಮಧ್ಯಮಪುರುಷಾಯೋತ್ತಮಪುರುಷಾಯ ಬ್ರಹ್ಮಚಾರಿಣೇ ನಮೋ ನಮಃ ಚಂದ್ರ ಲಲಾಟಾಯ ಕೃತ್ತಿವಾಸಸೇ ನಮೋನಮಃ" ಪುರುಷಶಬ್ದವಾಚ್ಯನಾದ ಚಂದ್ರಧರನಾದ ಬ್ರಹ್ಮಚಾರಿಯಾದ ನಿನಗೋಸ್ಕರ ನಮಸ್ಕಾರವೆಂದುದು.

ಬ್ರಹ್ಮಚಾರಿಯಹಂಗೆ ಯೋನಿಸಂಗಮಂ ಪೇಟಲ್ಬಾರದಾಗಿ ವಿಷ್ಣುವು ಸ್ತ್ರೀರೂಪಾಂತು ಪುರುಷಸಂಗಮಂ ಬಯಸಿದಲ್ಲಿ ಪುರುಷನಾಗಿ ಕ್ರೀಡಿಸಿದನು, ತನಗೆ ಅಜ್ಞಾನ ಕವಿದ ಕಾಲದಲ್ಲಿ ಈಶ್ವರನುಂ ಗುರುವಾಗಬೇಕೆಂದು ಪ್ರಾರ್ಥಿಸಲಾಗಿ ಭಸ್ಮತಾರಕೋಪದೇಶಮಂ ಪೇಳಿ ಭಸ್ಮಮಂ ತಿನಲ್ ಕೊಟ್ಟು ನಿನ್ನ ಹೃದಯದಲ್ಲಿ ಜ್ಯೋತಿರ್ಲಿಂಗವು ಕಾಣಿಪುದೆನಲು "ಅಥ ಹರಿಃ ಸ್ವಹೃದಿ ಧ್ಯಾತ್ವಾ ದೀಪೋದೃಷ್ಟ್ವಾ ಇತಿ ಶಿವಸುಹ" ಇಂತೆಂದು ಶ್ರುತಿ ಪೇಳಿತ್ತಾಗಿ ಆ ವಿಷ್ಣುವಿಗೆ ಜ್ಞಾನೋಪದೇಶದಿಂ ಗುರುವಾದನು.

ಮತ್ತಂ "ನಾರಾಯಣಾ ದ್ಬ್ರಹ್ಮಾ ಜಾಯತೇ ನಾರಾಯಣಾದ್ರುದ್ರೋ ಜಾಯತೇ" ಎಂದು ನಾರಾಯಣೋಪನಿಷತ್ತಿನಲ್ಲಿ ಪೇಳಿತ್ತಾಗಿ, ಅದೇ ವಿಷ್ಣುವು ಜಗದುತ್ಪಾದನನಿಮಿತ್ತಮಾಗಿ ಈಶ್ವರನುಂ ಭ್ರೂಮಧ್ಯದಲ್ಲಿ ಧ್ಯಾನಿಸಲಾಗಿ ತತ್ಪುತ್ರವ್ಯಾಜದಿಂ ನೀಲಲೋಹಿತವೆಸರಾಂತು ಪ್ರಾದುರ್ಭವಿಸಿದನಾಗಿ "ನಾರಾಯಣಸ್ಥಿತೋ ರುದ್ರೋ ಧ್ಯಾನಾದ್ಬಹಿರ ಪೃಶ್ಯತ" ಎಂದು ಸ್ಕಾಂದಪುರಾಣದಲ್ಲಿ ಪೇಳಿತ್ತಾಗಿ ಓರ್ವನೆ ಶಿವನೇ

ಗಂಡನಾಗಿ ಗುರುವಾಗಿ ಪುತ್ರನಾದನೆಂಬುದಱಿಂದೆ ಆ ಆ ಭಕ್ತರ ಮ ನೋಭೀಷ್ಟಂಗಳೆಂತಿರ್ಪವು ಆ ಆ ರೀತಿಯಲ್ಲಿ ಪ್ರಾದುರ್ಭವಿಸಿ ತೋ ರ್ಪನೆಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ. ॥೧೬॥

ಪದ ॥ ಸರಸಿಜಭವನ ಫಣೆಯೊಳುದಿಸಿದನು ಶಂ ।
ಕರನೆಂದು ನುಡಿಯುತ್ತಿರ್ಪರ್ ಕೇಳು ಶ್ವೇತಾಶ್ವ ।
ತರದಲ್ಲಿ ವಿಶ್ವಾಧಿಕೋರುದ್ರೋ ಮಹರ್ಷಿಯೆಂ ।
ದಿರದೆ ಹಿರಣ್ಯಗರ್ಭಂ ಜನಯಾಮಾಸ ।
ಹರುಷದಿಂ ಪೂರ್ವಂ ಸಂತೋ ದೇವ್ರೋ ಎನೆ ।
ಪರಮೇಷ್ಠಿಗೆ ಪಿತೃನೀಶನೆಂದುದು ಶ್ರುತಿ ।
ಹರನು ಭಕ್ತಿಪ್ರಿಯನಾದುದಱಿಂದೆ ಆ ।
ಅರವಿಂದಜನ ತಪೋನಿಷ್ಠೆಗೆ ಮೆಚ್ಚಿ ।
ಹರುಷದಿಂ ಸೃಷ್ಟ್ಯರ್ಥವಾಗಿ ನಿಟಿಲವನು ।
ಭರದೆ ಭೇದಿಸಿಯರ್ಧನಾರೀಶ್ವರನಾಗಿ ।
ವರನೀಲಲೋಹಿತ ವೆಸರಾಂತಾವಿರ್ಭವಿ ।
ಸಿರೆ ಮೃತಿಯೊಂದಿದ ಬ್ರಹ್ಮಂಗಸುವನಿತ್ತು ।
ಹರನು ಲೀಲಾವಿನೋದದೊಳೊಪ್ಪುತಿರಲು ಭೀ ।
ಕರಚಿತ್ತನಾಗಿ ಸ್ತೋತ್ರವ ಮಾಡಿದನಂಭೋ ।
ಧರಶ್ಯಾಮಳಕುಂತಳಾಯ ಎನುತಲೀ ।
ಶ್ವರನಾಗ ಮೆಚ್ಚಿಯಭೀಷ್ಟವನುಂ ಕೊಟ್ಟನೆಂ ।
ದೊರೆವುದು ಸ್ಕಾಂದಾದಿಪುರಾಣನಿಕರ ಮೀ ।
ಶ್ವರನಿಗೆ ವಿಧಿ ಪಿತನಾದೊಡೆ ಸ್ತೋತ್ರಮಂ ।
ವಿರಚಿಸಲೇಂ ಕಾರಣವದು ಪುಸಿಯದಂ ।
ತಿರಲಿ ಸೋಮಃಪವತೇಯೆಂಬು ಮೊದಲಾಗಿ ।
ತರಣಿ ವಹ್ನೀಂದ್ರವಿಷ್ಣುಗಳ ಪುಟ್ಟಿಸಿದನೀ ।
ಶ್ವರನೆಂದುದು ಶ್ರುತಿಯದು ಪಿಂತೆ ಬಹಳ ವಿ ।
ಸ್ತರವಾಗಿ ಪೇಳ್ದಿರಲಜ್ಞಾನಬುದ್ಧಿಯಿಂ ।
ನರಕಭಾಜನವಹುದುಚಿತವೆ ಕೇಳಲೊ ।
ಗಿರಿಶನ ಮುಳಿದು ಸಿಂದಿಸಿದ ವಿಧಾತ್ರನ ।
ಶಿರವ ಕತ್ತರಿಸಿ ಕರದೊಳಾಂತನದಕಿನ್ನು ।
ಪರಿಹಾರವಾವುದು ಸುತೆಗೆಳಸುತೆ ಪಿಂತೆ ।

ಹರಿಣರೂಪಿಂ ಋಂಪಜನನೆಚ್ಚು ಕೊಲ್ಲನೆ ।
ಹರನಾಗಳವನ ತಲೆಯು ಗಗನದೆ ಮೃಗ ।
ಶಿರೆಯೆಂಬ ಪೆಸರಾಂತುದು ವೀರೇಶನು ।
ಸಿರಿಯು ಮೂಗನು ಕೊರೆದು ಬಿಸುಡನೆ ಯೀ ।
ಧರೆಯೊಳಬ್ಜಜನೊಲಿದು ಭಜಿಸಿ ಬ್ರಹ್ಮೇ ।
ಶ್ವರನೆಂಬ ಪೆಸರಾಂತುದು ಬ್ರಹ್ಮನಂದಿಯು ।
ರರೆಯಪಕೆ ತಾಂ ಸಾಕ್ಷಿಯಾಗಿಹುದು ॥೧೭॥

ಬ್ರಹ್ಮನ ಪಣೆಯೊಳ್ ರುದ್ರಂ ಪುಟ್ಟಿದನೆಂದು "ಲಲಾಟಾದ್ರುದ್ರೋ ಜಾಯತೇ ನಾಮ ಮೇ ಕುರು ನಾಮಾಕರೋತ್" (ಲಲಾಟಾತ್—ಬ್ರಹ್ಮನ ಲಲಾಟದತ್ತಣಿಂದೆ, ರುದ್ರಃ—ರುದ್ರನು, ಜಾಯತೇ—ಪುಟ್ಟಿದನು, ಮೇ—ಎನಗೆ, ನಾಮ—ಹೆಸರನ್ನು, ಕುರು—ಮಾಡು, ನಾಮ—ರುದ್ರನೆಂಬ ಹೆಸರನ್ನು, ಅಕರೋತ್—ಮಾಡಿದನು.) ಇಂತೆಂದು ಸುಬಾಲೋಪನಿಷತ್ತು ಪೇಳುತ್ತಾಗಿ, ಆ ಬ್ರಹ್ಮನ ಪಣೆಯಲ್ಲಿ ಅವಾಂತರರುದ್ರನು, ಭಕ್ತಹಿತಾರ್ಥಮಾಗಿ ಪುಟ್ಟಿದನೆಂದಱಿವುದು. ಅಂತಲ್ಲದೊಡೆ "ನಾರಾಯಣಾದ್ರುದ್ರೋ ಜಾಯತೇ" (ನಾರಾಯಣನತ್ತಣಿಂದೆ ರುದ್ರಂ ಪುಟ್ಟಿದ) ನೆಂದು ನಾರಾಯಣೋಪನಿಷತ್ತು ಪೇಳುತ್ತಾಗಿ; ರುದ್ರನು ನಾರಾಯಣನಲ್ಲಿ ಪುಟ್ಟಿದನೆಂದು ನಿಶ್ಚಯಿಸಲ್ತಕ್ಕುದೋ, ಬ್ರಹ್ಮನಲ್ಲಿ ಪುಟ್ಟಿದನೆಂದು ನಿಶ್ಚಯಿಸಲ್ತಕ್ಕುದೋ; ಒರ್ಬ ವೇದಪುರುಷನ ವಾಕ್ಯದಲ್ಲಿ ಎರಡು ಮಾತು ಪುಟ್ಟುತ್ತಾಗಿ ವೇದಪುರುಷನ ವಾಕ್ಯಮಂ ಸಟೆಯೆನಬಾರದಾಗಿ ವಿಷ್ಣು ಬ್ರಹ್ಮರ ಭಕ್ತಿಹಿತಾರ್ಥಮಾಗಿ ರುದ್ರಾಂಶೀಭೂತವಾದ ನೀಲಲೋಹಿತ ರುದ್ರನು ಪಣೆಗಳೊಳಾವಿರ್ಭವಿಸಿದನೆಂದಱಿವುದು. ಅದರ್ಕೆ ಸಾಕ್ಷಿ:—

"ವಿಶ್ವಾಧಿಕೋ ರುದ್ರೋ ಮಹರ್ಷಿಃ ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ ಸ ನೋ ದೇವಃ ಸ್ಮೃತ್ಯಾ ಸಂಯುನಕ್ತು" (ವಿಶ್ವಾಧಿಕಃ—ವಿಶ್ವಕ್ಕೆ ಒಡೆಯನಾದಂಥ, ಮಹರ್ಷಿಃ—ಋಷಿಶ್ರೇಷ್ಠನಾದಂಥ, ರುದ್ರಃ—ರುದ್ರನು, ಪೂರ್ವಂ—ಮೊದಲು, ಹಿರಣ್ಯಗರ್ಭಂ—ಬ್ರಹ್ಮನನ್ನು, ಜನಯಾಮಾಸ—ಹುಟ್ಟಿಸಿದನು, ಸಃ—ಆ, ದೇವಃ—ಮಹಾದೇವನು, ನಃ—ನಮ್ಮನ್ನು, ಸ್ಮೃತ್ಯಾ—ನೆನಹಿನೊಡನೆ, ಸಂಯುನಕ್ತು—ಕೂಡಲಿ)

ಇಂತೆಂದು ತೈತ್ತಿರೀಯ, ಬೃಹಜ್ಜಾಬಾಲ, ಶ್ವೇತಾಶ್ವತರ, ನಾರಾಯಣೋಪನಿಷತ್ತು ಮೊದಲಾದುವಱಲ್ಲಿ ರುದ್ರನಿಂದೆ ಪೂರ್ವಸೃಷ್ಟಿಯಲ್ಲಿ ಬ್ರಹ್ಮ ಪುಟ್ಟಿದನೆಂದು ಪೇೞಲ್ಪಟ್ಟಿತಾಗಿ, ಮತ್ತಂ ಅಥರ್ವಶಿಖೆಯಲ್ಲಿ–"ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ" ಎಂದು ಪೇೞಿತ್ತಾಗಿ, ಒಂದೊಂದು ಕಲ್ಪದಲ್ಲಿ ಒರ್ಬೊರ್ಬರ ಭಕ್ತಿನಿಮಿತ್ತವಾಗಿ ಅವರವರಲ್ಲಿ ಸಂಜನಿಸಿ ತೋರ್ದನೆಂದಱಿವುದು.

ಇದರ್ಕೆ ಸಾಕ್ಷಿ:— ಕೂರ್ಮಪುರಾಣದಲ್ಲಿಯುಂ, ಸೂತಸಂಹಿತೆಯಲ್ಲಿಯುಂ, ಕಾಳಿಕಾಖಂಡದಲ್ಲಿಯುಂ ಇದೊಂದೇ ಗ್ರಂಥಂ ಸಮಾನವಾಗಿ ಪೇೞ್ದುದು:— "ತತಾಪ ಪರಮಂ ಘೋರಂ ತಪೋ ವಿಪ್ರಾಶ್ಚತುರ್ಮುಖಃ । ಸೃಷ್ಟ್ಯರ್ಥಂ ಬ್ರಹ್ಮಣಸ್ತಸ್ಯ ಭ್ರುವೋ ಘ್ರಾಣಸ್ಯ ಮಧ್ಯತಃ ॥ ಅರ್ಧನಾರೀಶ್ವರೋ ಭೂತ್ವಾ ಪ್ರಾದುರಾಸೀತ್ ಕೃಪಾನಿಧಿಃ" (ವಿಪ್ರಾಃ–ನೈಮಿಶಾರಣ್ಯವಾಸಿಗಳಾದ ಬ್ರಹ್ಮರ್ಷಿಗಳಿರಾ, ಚತುರ್ಮುಖಃ–ಬ್ರಹ್ಮನು, ಸೃಷ್ಟ್ಯರ್ಥಂ–ಸೃಷ್ಟಿನಿಮಿತ್ತವಾಗಿ, ಪರಮಂ–ಉತ್ಕೃಷ್ಟವಾದ, ಘೋರಂ–ಭಯಂಕರವಾದ, ತಪಃ–ತಪಸ್ಸನ್ನು, ತತಾಪ–ತಪಿಸಿದನು, ತಸ್ಯ–ಆ, ಬ್ರಹ್ಮಣಃ–ಬ್ರಹ್ಮನ, ಭ್ರುವೋಃ–ಹುಬ್ಬುಗಳ, ಘ್ರಾಣಸ್ಯ–ಮೂಗಿನ, ಮಧ್ಯತಃ–ಮಧ್ಯಪ್ರದೇಶದತ್ತಣಿಂದೆ, ಕೃಪಾನಿಧಿಃ–ಕೃಪೆಗಳ್ಗೆ ಸ್ಥಾನವಾದಂಥ ಮಹಾದೇವನು, ಅರ್ಧನಾರೀಶ್ವರಃ–ಅರ್ಧನಾರೀಶ್ವರನು, ಭೂತ್ವಾ–ಆಗಿ, ಪ್ರಾದುರಾಸೀತ್–ಪ್ರಾದುರ್ಭವಿಸಿದನು) ಬ್ರಹ್ಮನ ತಪಸ್ಸಿಗೆ ಮೆಚ್ಚಿ ಪ್ರಾದುರ್ಭವಿಸಿದನೆಂದು ಪೇೞ್ದುದಾಗಿ; "ಅಂಭೋಧರಶ್ಯಾಮಲಕುಂತಳಾಯೈ ತಟಿತ್ಪ್ರಭಾಲಂಬಿಜಟಾಧರಾಯ । ಜನಕಾಯ ಕನಕಾದ್ರಿವಾಸಾಯ ದೇವದೇವಾದಿಕರ್ತ್ರೇ ನಮಸ್ತೇ ನಮಸ್ತೇ" ಎಂಬಿವಾದಿಯಾಗಿ ಅರ್ಧನಾರೀಶ್ವರನಂ ಕುಱಿತು ಸ್ತೋತ್ರಮಂ ಮಾಡಿ ಇಷ್ಟಾರ್ಥಮಂ ಪಡೆದನೆಂದು ಸ್ಕಾಂದಂ ಮೊದಲಾದ ಪುರಾಣಂಗಳ್ ಪೇೞ್ದುದಾಗಿ; ಮತ್ತಂ "ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾ ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತಾ ಇಂದ್ರಸ್ಯ ಜನಿತಾಥ ವಿಷ್ಣೋಃ" ಎಂದುದಾಗಿ; "ಶ್ರುತ್ವಾ ಸಗರ್ವವಚನಂ ಪದ್ಮಯೋನೇರಥೇ

ಶ್ವರಃ । ಸಸರ್ಜ ಸ್ವಾತ್ಮನಃ ಕಶ್ಚಿದ್ಭೈರವಂ ಲೋಕದಾಹಕಂ । ಚಕರ್ತ ಕರಜಾಗ್ರೇಣ ಬ್ರಹ್ಮಣಃ ಪಂಚಮಂ ಶಿರಃ'' ಎಂದು ಕೂರ್ಮಪುರಾಣ ದಲ್ಲಿ ಬ್ರಹ್ಮಶಿರಶ್ಛೇದನಂ ಪೇಳಿತ್ತಾಗಿ; ಸ್ಕಾಂದಪುರಾಣದಲ್ಲಿ ಸರಸ್ವ ತೀನಾಸಿಕಾಚ್ಛೇದನಂ ಪೇಳಿತ್ತಾಗಿ; "ಪ್ರಜಾಪತಿರ್ವೈಸ್ವಾಂ ದುಹಿ ತರಮಭ್ಯಧಾವತ್'' ಎಂದು ಶ್ರುತಿ ಪೇಳಿತ್ತಾಗಿ; ಸುತೆಗಳಿಪಿ ಮೃಗ ರೂಪಧರನಾದ ಬ್ರಹ್ಮನ ಶಿರಚ್ಛೇದನಂ ಮಾಡಿದನಾಗಿ ಕಲ್ಪಕಲ್ಪಾಂ ತರಂಗಳಲ್ಲಿಯುಂ ಬ್ರಹ್ಮವಿಷ್ಣುಗಳು ಈಶ್ವರನಂ ಭಜಿಸುತಿರ್ಪರಾಗಿ; ಬ್ರಹ್ಮಪುತ್ರನೀಶ್ವರನೆಂಬುದು ಪುಸಿಯೆಂಬುದೀ ಸೂತ್ರದ ಬಹುಶಬ್ದನಿ ರ್ವಚನಾರ್ಥಂ ॥೧೭॥

ಪದ ॥ ಹರನ ವೀರ್ಯದಿ ಜನಿಸಿದ ಹನುಮಂತನು ।
ಹರಿಗೆ ಸೇವಕನಾದನೆಂದುಸಿರುತಿರ್ಪಯ್ ।
ಸುರರಿಪುವಂ ಕೊಲಲವನು ಸಹಾಯುಮಾ ।
ಗಿರಲೆಂದು ಶಂಭು ಪ್ರೇರಿಸಿದನದೆಂತೆನೆ ।
ಪುರುಹೂತಜಿತು ಸರ್ಪಬಾಣದಿಂ ರಾಮನ ।
ಹರಣವಂ ಕೊಂಡಾಗ ಸಂಜೀವನದಿಂದೆ ।
ಮರಳಿ ಪಡೆಯನೆ ತತ್ಸುತ ಮತ್ಸ್ಯ ಹನುಮನಿಂ ।
ತಿರಿಗಿ ಪಡೆಯನೆ ರಾಮನ ಸರ್ವಸ್ವಮನೀ ।
ಪರಿಯಿಂದೆ ಬಹುಕಾರ್ಯಸಾಧನನಾಗಿ ಶಂ ।
ಕರನಾಜ್ಞೆಯಿಂದಸುರನ ಜಯಿಸಿದನದಂ ।
ತಿರಲಿ ರಾಮನ ಭೃತ್ಯ ರಾಮನಂ ಭಜಿಸದೆ ।
ಗಿರಿಶನಂ ಭಜಿಸಿದನೇಂ ಕಾರಣ ರಘು ।
ವರ ಹನುಮಂತರೀರ್ವರ್ ಶಿವಭಕ್ತರೀ ।
ಧರೆಯೊಳು ಬಹುದೃಷ್ಟಮಾಗಿರೆ ರಾಮೇ ।
ಶ್ವರ ಹನುಮದೀಶ್ವರನೆಂದದಕೆ ಶ್ರುತಿ ।
ಸರಣಿಯೆಂಬರೆಯಲ್ಲದೇಂ ಕಾರಣ ಪೇಳು ।
ಮುರರಿಪುವಂ ಬಿಟ್ಟು ಕಡೆಯಲ್ಲಿ ತಾಂ ವೀರೇ ।
ಶ್ವರನಿಂದೆ ಲಿಂಗಧಾರಣೆಯಾಗಿ ಚಂದ್ರಶೇ ।
ಖರನಿಗೆ ವಾಹನವಾದನದಕೆ ಕೇಳು ।
ಹರಿಕಾರ್ಯರ್ಥ ಪ್ರತಿಷ್ಠಾಪ್ಯಯೆಂದುಸಿರ್ದ ಮ ।

ತ್ರಿರದೆ ಹನುಮರ್ಮಾ ಗಣಪುಂಗವ ಯೆಂದು ।
ಭರದಿಂದಲೆ ಸರ್ವಾಂಗಲಿಂಗವೀರೇ ।
ಶ್ವರ ಶಿಷ್ಯೋಭೂತ್ ಎಂದು ಪೌರಾಣೋಕ್ತಿ ।
ವಿರಚಿಸಿ ಪದ್ಮಪುರಾಣದೊಳೊಲಿದಥೇ ।
ಶ್ವರೋ ಹನೂವಂತಮಾರುರೋಹ ವೃಷಂ ಯಥಾ ।
ಸಾಕಿಸಿಂತಿರೆ ರಾಮಭೃತ್ಯನೆಂತಹನೆಲೊ ।
ನರಪಶುಗಳಿರ ಮಾಯಾತೀತಗೆ ಯಥ ।
ಕ್ಷರಿತ ರೇತಸ್ಸುಂಟೆಂಬುವುದದೇ ಪುಸಿ ।
ಹೊಲಿಗಣೆಲೆಯ ಮೆಯ್ದು ಸುಖಿಪಂತೆ ಕುಱಿ ನಿಮ್ಮ ।
ಮಕುಳುತನದ ಚರಿತೆಯಿಂತೆಂದು ವಿ ।
ಸ್ತರಿಸಲಭೇದ್ಯವು ಮತ್ತೆ ದಿವಾಂಧನಿಂ ।
ತರಣಿಗದೇಂ ಕೊಱತೆ ಬಹುದೇ ಕರ್ಮ ।
ಪರಿಪಾಕ ನಿಮಗಿನಿತೇ ಖಗ್ರಾಹ ।
ಪುರುಷಾಯ ಬ್ರಹ್ಮಚಾರಿಣೇಯೆನೆ ಸಾಱುತೆ ॥೧೪॥

ಹರನ ವೀರ್ಯದಿಂದೆ ಜನಿಸಿದ ಹನುಮಂತನು ಹರಿಗೆ ಸೇವಕ ನಾದನೆಂದು ಅಜ್ಞಾನಿನಗಳಾಡುವರ್. ಸರ್ಪಾಸ್ತ್ರದಿಂ ಇಂದ್ರಜಿತು ರಾಮನಂ ಕೊಂದಾಗ ಸಂಜೀವನಮಂ ತಂದು ಮರಳಿ ಪ್ರಾಣಮಂ ಪಡೆದನು. ಹನುಮಂತನ ಮಗ ಮತ್ಸ್ಯಹನುಮನು ರಾಮನ ಸರ್ವಸ್ವಮಂ ರಕ್ಷಿಸಿದನು. ಈಪರಿಯಿಂ ಬಹು ಕಾರ್ಯಸಾಧನನಾಗಿ ಹರನಾಜ್ಞೆಯಿಂ ರಾವಣನಂ ಕೊಲಿಸಿ ರಾಮನ ಹೆಂಡತಿಯ ಸೆಱೆಯಂ ಬಿಡಿಸಿ ರಾಮಂಗೆ ಬಂದ ಬ್ರಹ್ಮಹತ್ಯಾದೋಷಮಂ ಶಿವಲಿಂಗಪೂಜೆಯಿಂ ಪರಿಹರಿಸಿ ತಾಂ ಶಿವಭಕ್ತನೆಂಬುದರ್ಕೆ ಕುಱುಹಾಗಿ ಹನುಮದೀಶ್ವರನೆಂಬ ಲಿಂಗಮಂ ಭಜಿಸಿ ಸೂರ್ಯನಲ್ಲಿ ಪುಟ್ಟದ ಕಿರಣಂಗಳು ಇಹಪರಸ್ಥಲಂಗಳಲ್ಲಿ ಎಲ್ಲಮಂ ವ್ಯಾಪಿಸಿ ಕಡೆಯೊಳ್ ಸೂರ್ಯನಲ್ಲಿಯೇ ಲಯಮನೈದುವಂತೆ ಕಡೆಯೊಳ್ ವೀರಶೈವದೀಕ್ಷೆಯಂ ಪಡೆದನು. ಇದರ್ಕೆ ಸಾಕ್ಷಿ— "ಹರಿಕಾರ್ಯಾಣಿ ಪ್ರತಿಷ್ಠಾಪ್ಯ ಹನುಮಾನ್ ಗಣಪುಂಗವಃ । ಸರ್ವಾಂಗಲಿಂಗೀ ವೀರೇಶಶಿಷ್ಯೋಭೂತ್ತದನಂತರಂ" (ಗಣಪುಂಗವಃ—ಗಣಶ್ರೇಷ್ಠನಾದ, ಹನುಮಾನ್—ಹನುಮಂತನು, ಹರಿಕಾರ್ಯಾಣಿ ರಾಮಾವತಾರವನಾಂತ ವಿಷ್ಣುವಿನ ಕಾರ್ಯಂಗಳನು, ಪ್ರತಿಷ್ಠಾಪ್ಯ—ಪ್ರತಿಷ್ಠೆಯಂ ಮಾಡಿ,

ತದನಂತರೇ–ಅಷ್ಟಬಿಮೇಲೆ, ವೀರೇಶಶಿಷ್ಯಃ–ವೀರಭದ್ರನ ಶಿಷ್ಯನಾಗಿ, ಸರ್ವಾಂಗಲಿಂಗೀ–ರೋಮಕೋಟಿಲಿಂಗವುಂಟಾದವನು, ಅಭೂತ್–ಆದನು) ಇಂತೆಂಬ ಪುರಾಣೋಕ್ತಿಗಳುಂಟಾಗಿ; ಮತ್ತಂ ಪರಮೇಶ್ವರಂಗೆ ವಾಹನವಾದನು. ಅದರ್ಕೆ ಸಾಕ್ಷಿ– "ಅಥೇಶ್ವರೋ ಹನೂಮಂತಮಾರುರೋಹ ವೃಷಂ ಯಥಾ" (ಅಥ–ಅನಂತರದಲ್ಲಿ, ಈಶ್ವರಃ–ಪರಮೇಶ್ವರನು, ಹನೂಮಂತಂ–ಹನುಮಂತನನ್ನು, ವೃಷಂಯಥಾ–ವೃಷಭೇಶ್ವರನು ಹೇಗೋ ಹಾಗೆ; ಆರುರೋಹ–ಏಱಿದನು.) ಇಂತೆಂದು ಪದ್ಮ ಪುರಾಣದಲ್ಲಿ ಪೇೞುತ್ತಾಗಿ; "ಪಾದೇ ವಿಷ್ಣುವಿಲೋಚನಂ ಕಟಿತಟೇ ನಿತ್ಯಂ ನೃಸಿಂಹಾಜಿನಂ ಹಾರೇ ಕೂರ್ಮಶಿರಃ ಕರಾಂಬುಜಲಸತ್ಕಂಕಾಳನಾಮಾಯುಧಂ । ಶೂಲಾಗ್ರೇ ಶಬಕೇಶವೋ ಹರಿಶಿರೋಮಾಲಾಚ ಮಾಳಾ ಸದಾ ಏವಂ ವಿಷ್ಣುಮಯಿ ಶೈವಃ ಸ್ವಯಮಿತಿ ವ್ಯಕ್ತಂ ಪುರಾಣೋದಿತಂ" ಎಂದು ಸಮುದ್ರಮಧ್ಯದೊಳಿರ್ಪ ಮತ್ಸ್ಯಕೇಶ್ವರಲಿಂಗದ ಸಮೀಪದಲ್ಲಿ ತನ್ನೊಡೆಯುಂಗೊಡೆಯನಾದಾತನೀಶ್ವರನೆಂದು ಹನುಮಂತನೇ ಬರೆದಿರ್ದನಾದಕಾರಣ ಮಹಾನಾಟಕದಲ್ಲಿ ಪೇೞುತ್ತಾಗಿ; ಹನುಮಂತನು ಶಿವಭಕ್ತನೆಂದಱಿವುದು.

ಮತ್ತಂ ನಾದಾತೀತವೇದಾತೀತಗುಣಾತೀತಕಾಲಾತೀತನಾದ ಮಹಾದೇವಂಗಧೋರೇತಸ್ಸುಂಟೆಂಬುದು ಪುಸಿ. "ನವೀರ್ಯಂ ವೈಚನಿರ್ದೇಹಂ ಮಾಂಸಾಸ್ಥಿರುಧಿರಂ ನಚ । ಇಂದ್ರಚಾಪಮಿವಾಕಾಶೇ ದರ್ಪಣೇ ಪ್ರತಿಬಿಂಬವತ್" (ಶಿವಂಗೆ, ವೀರ್ಯಂ–ವೀರ್ಯವು, ನ ವೈಚ–ಇಲ್ಲವೇಇಲ್ಲ, ನಿರ್ದೇಹಂ–ದೇಹವು ಇಲ್ಲ, ಮಾಂಸ–ಮಾಂಸವು, ಅಸ್ಥಿ–ಎಲುಗಳು, ರುಧಿರಂ–ರಕ್ತವು, ನ–ಇಲ್ಲ, ಆಕಾಶೇ–ಆಕಾಶದಲ್ಲಿ, ಇಂದ್ರಚಾಪಮಿವ–ಇಂದ್ರಚಾಪದೋಪಾದಿಯಲ್ಲಿ, ದರ್ಪಣೇ–ದರ್ಪಣದಲ್ಲಿ, ಪ್ರತಿಬಿಂಬವತ್–ಪ್ರತಿಬಿಂಬದೋಪಾದಿಯಲ್ಲಿ, ದೃಶ್ಯತೇ–ಕಾಣಲ್ಪಡುತ್ತಲಿಹನು.) ಇಂತೆಂದು ವಾತುಲಾಗಮದಲ್ಲಿ ಪೇೞುತ್ತಾಗಿ, ಅಂಜನಾದೇವಿಯ ಭಕ್ತಿನಿಮಿತ್ತಮಾಗಿ ಅನೇಕರುದ್ರರ ಮಧ್ಯದೊಳೊರ್ವ ರುದ್ರಂ ಕಪಿರೂಪಿನಿಂ ತನ್ನ ವೀರ್ಯಮಂ ಬಿಟ್ಟನೆಂದಱಿವುದು.

'ಬ್ರಹ್ಮಚಾರಿಣೇನಮೋನಮಃ' ಎಂದು ಋಗ್ವೇದಂ ಪೇೞುತ್ತಾಗಿ

ಬ್ರಹ್ಮಚಾರಿಯಾದ ಮಹಾದೇವಂಗೆ ಕಾಕುವಾರ್ತೆಗಳಿಲ್ಲವೆಂಬುದೀ ಸೂತ್ರದ ಬಹುಶಬ್ದನಿರ್ವ್ವಚನಾರ್ಥಂ. ‖೧೮‖

ಪದ ‖ ಮಲಹರನೀಶಂ ಶ್ಮಶಾನಭೂಮಿಯೊಳ್ ತಾಂ ।
ನಿಲಯನಾಗಿಹನಾತನಪವಿತ್ರನೆಂದು ನೀ ।
ನುಲಿಯುತ್ತಿರ್ಪಯ್ ಕೇಳಿನ್ನಥರ್ವಣದಲ್ಲಿ ತಾ ।
ನೊಲಿದಗ್ನಿರಿತಿ ಭಸ್ಮ ವಾಯುರಿತಿ ಭಸ್ಮ ।
ಜಲಮಿತಿ ಭಸ್ಮಸ್ಥಲಮಿತಿ ಭಸ್ಮ ಯೆಂ ।
ದೊಲವಿಂದೆ ವ್ಯೋಮೇತಿ ಭಸ್ಮಸರ್ವಂ ಹವಾ ।
ಗೆಲವಾಂತಿದಂ ಭಸ್ಮಮನಪಿತಾನಿಯೆಂ ।
ದೊಲಿದು ಚಕ್ಷೂಂಷಿ ಭಸ್ಮಾನಿ ಗ್ರಸತಿ ಯೆಂ ।
ದಲಘುವಾಕ್ಯದ ಸ್ವೇನತೇಜಸಾ ತಸ್ಮಾತ್ತಂ ।
ದಲಸದೆಮುಪಸಂಹರ್ತೇ ಮಹಾಗ್ರಾಸಾಯ ।
ಪಲತೆಜದಿಂ ಸ್ತುತಿಸುತೆ ವೈನಮಃ ಎನೆ ।
ಎಲೆ ಕಾಂಕ್ಷೆ ವಹ್ನಿಯಿಂ ಸಕಲಾಜಾಂಡಂಗಳಂ ।
ಜಲಜಾಕ್ಷ ಜಲಜಾಸನ ಮುಂತಾದರಂ ।
ಗೆಲವಿಂದೆ ಸುಟ್ಟು ತದ್ಭಸಿತಾಂಗನಾಗಿ ನಿ ।
ಶ್ಚಲದೆ ಮಹಾಶ್ಮಶಾನಸ್ಥನೆಂದೆನಿಸಿದ ।
ನೆಲವೊ ಸ ಅಸ್ತಿ ಭಗವಾನೇಕೋ ಎಂ ।
ದೊಲವಿಂದ ನದ್ವಿತೀಯೋಸ್ತಿ ಕಶ್ಚನ ಎನೆ ।
ಚಲವ ಬಿಡೈ ಇಚ್ಛಯಾ ಪಾರ್ವತೀಶಸ್ಯ ।
ಪ್ರಲಯೋನಾನ್ಯಥಾದ್ವಿಜಾಯೆಂದಾದಿತ್ಯ ।
ದಲಿ ಮಾನವೀಯಸಂಹಿತೆ ಪೇಳ್ದುದು ಕೇಳು ।
ಜಲಕಲ್ಪದಲ್ಲಿ ವಟಪತ್ರಶಯನನಾಗಿ ।
ಬಲರಿಪುವಿಹನು ವಹ್ನಿಪ್ರಳಯದೊಳು ಸಂ ।
ಕಲಿತನಾಗುತೆ ಲಯಮೊಂದುವನೀಶನೊಳ್ ।
ಪಲವಾತಿನಿಂದಲೇಂ ವೇದಪುರಾಣಪ್ರ ।
ಬಲವಾಕ್ಯಮಿಂತಿರೆ ದೃಷ್ಟಾಂತವಮಂ ಕೇಳು ।
ಸಲೆ ವಿಶ್ವಮಂ ದಹಿಸಿದ ಭಸ್ಮಮಂ ದೇಹ ।
ದಲಿ ತಳೆದಿಹನವನೇ ನಿತ್ಯನೆನಿಪನು ।
ಛಲರೆ ಹರಿಗೆ ಭಸ್ಮಚಿಹ್ನೆ ಸಹಜಮಲ್ತು ।

ವಿಲಯಕ್ಕೆ ಕಾರಣನದುನಿಮಿತ್ತದೆ ಕೇಳು ।
ನಲಿದೇಕೋರುದ್ರೋ ನದ್ವಿತೀಯಾಯುತಸ್ಥೇಯೆಂ ।
ದೊಲಿದು ಶ್ರುತಿಗಳುಸಿರಲು ಬ್ರಂದೆಯು ಸುಟ್ಟ ।
ನೆಲ ಸುಡುಗಾಡಾಗಿರಲಲ್ಲಿಹನವಮಂ ।
ಗಲನಲ್ತೆ ವಿಷ್ಣುವು ಸಾರೆ ಸರ್ವರನು ತ ।
ನ್ನೊಳು ಸೌಖ್ಯವ ಕೊಡುತಿರೆ ಶಂಕರಗದ ।
ಗಲಿಸದು ನಿಂದೆ ಕಾಣದೆ ಭವಕಿಜೀವರೆ ॥೧೯॥

ಮಹಾದೇವಂಸ್ಮಶಾನವಾಸಿಯಾದುದಱಿಂದೆ ಅಪವಿತ್ರನೆಂದು ಮೂಢಜನರಾಡುವರ.

"ಅಗ್ನಿರಿತಿ ಭಸ್ಮ ವಾಯುರಿತಿ ಭಸ್ಮ ಜಲಮಿತಿ ಭಸ್ಮ ಸ್ಥಲಮಿತಿ ಭಸ್ಮ ವ್ಯೋಮೇತಿ ಭಸ್ಮ ಸರ್ವಂ ಹವಾ ಇದಂ ಭಸ್ಮ ಮನ ಏತಾನಿ ಚಕ್ಷೂಂಷಿ ಭಸ್ಮಾನಿ ಗ್ರಸತಿ ಸ್ವೇನ ತೇಜಸಾ ತಸ್ಮಾದುಪಸಂಹರ್ತ್ರೇ ಮಹಾಗ್ರಾಸಾಯ ವೈನಮಃ" (ಅಗ್ನಿ, ವಾಯು, ಜಲ, ಭೂಮಿ, ಆಕಾಶವೇ ಮೊದಲಾದ ಪಂಚಮಹಾಭೂತಂಗಳುಂ ಭಸ್ಮವೆಂದು ಪೇೞೀ, ತಸ್ಮಾತ್—ಅದುಕಾರಣದತ್ತಣಿಂದೆ, ಉಪಸಂಹರ್ತ್ರೇ—ನೇತ್ರಾಗ್ನಿಯಿಂದೆ ಸಮಸ್ತಮಂ ಭಸ್ಮಮಯಮಂ ಮಾಡಿ ಸಂಹಾರಕರ್ತೃವಾದ, ಮಹಾಗ್ರಾಸಾಯ—ಸರ್ವಮಂ ಗ್ರಹಿಸುವಾತನಾದ, ಮಹಾದೇವಂಗೋಸ್ಕರ, ನಮಃ—ನಮಸ್ಕಾರವು,) ಇಂತೆಂದು ಅಥರ್ವಣವೇದಂ ಪೇೞುತ್ತಾಗಿ, ಅಂತಪ್ಪ ಮಹಾಪ್ರಳಯ ಕಾಲದಲ್ಲಿ "ಏಕಏವ ರುದ್ರೋ ನದ್ವಿತೀಯಾಯ ತಸ್ಥೇ ನ ಬ್ರಹ್ಮಾ ನ ಚ ವಿಷ್ಣುಃ" ಎಂದು ಜಾಬಾಲಿಶಾಖೆಯಲ್ಲಿ ಪೇೞುತ್ತಾಗಿ, ಮತ್ತಂ "ಸಅಸ್ತಿ ಭಗವಾನೇಕೋ ನದ್ವಿತೀಯೋಸ್ತಿ ಕಶ್ಚನ। ಇಚ್ಛಯಾ ಪಾರ್ವತೀಶಸ್ಯ ಪ್ರಳಯೋ ನಾನ್ಯಥಾ ದ್ವಿಜಾಃ" (ದ್ವಿಜಾಃ—ನೈಮಿಶಾರಣ್ಯವಾಸಿಗಳಾದ ಋಷಿಗಳಿರಾ, ಭಗವಾನ್—ಷಡ್ಗುಣೈಶ್ವರ್ಯಸಂಪನ್ನನಾದ, ಸಃ—ಆ ಪರಮೇಶ್ವರನು, ಇಚ್ಛಯಾ—ತನ್ನಿಚ್ಛೆಯಿಂದೆ, ಏಕಃ—ಒರ್ವನೆ, ಅಸ್ತಿ—ಇರುತಿರ್ದನು, ದ್ವಿತೀಯಃ—ಎರಡನೆಯವನಾದ, ಕಶ್ಚನ—ಆವನೊರ್ವನುಂ, ನಾಸ್ತಿ—ಇಲ್ಲ. ಅನ್ಯಥಾ—ಮತ್ತೊರ್ಬನಿಂದೆ, ಪಾರ್ವತೀಶಸ್ಯ—ಪರಮೇಶ್ವರಂಗೆ, ಪ್ರಳಯಃ—ಪ್ರಳಯವು, ನ—ಇಲ್ಲ. ತಾನೇಪ್ರಳಯಕರ್ತೃವೆಂ

ಬುದರ್ಥ.) ಇಂತೆಂದಾದಿತ್ಯಪುರಾಣದ ಮಾನವೀಯಸಂಹಿತೆ ಪೇಳುತ್ತಾಗಿ, ವಿಷ್ಣುಬ್ರಹ್ಮಾದಿಸಮಸ್ತದೇವತಾನಿಚಯಮಂ ದಹನಂಗೈದುದರ್ಕೆ ಕುರುಹಾಗಿ ತದ್ಭಸ್ಮಮಂ ಸರ್ವಾಂಗೋದ್ಧೂಳನಂಗೈದು ಬ್ರಹ್ಮಾಂಡವೆಂಬ ಶ್ಮಶಾನಭೂಮಿಯಲ್ಲಿ ಏಕೋದೇವನಾಗಿ ಸಮಸ್ತ ಜೀವರಾಶಿಗಳಂ ತನ್ನಲ್ಲಿಯೇ ಇಂಬುಗೊಟ್ಟು ಪರಮಾನಂದನೃತ್ಯವನೆಸಗಿ ಆಕಾಶದಲ್ಲಿ ತನ್ನ ಮಸ್ತಕದಲ್ಲಿ ಸ್ವೇದಬಿಂದುವಿನುಂದಡಿಂ ಜನಿಸಿದ ಮಹಾಗಂಗೆಯಿಂದ ಅನೇಕಬ್ರಹ್ಮಾಂಡಂಗಳಂ ಘನಸೃಷ್ಟಿಯಂ ಮಾಡಿದಂ; ಅದುಕಾರಣದಿಂ ಮಹಾಶ್ಮಶಾನವಾಸಿಯೆನಿಸಿದನೀಶ್ವರಂ.

ಮತ್ತಂ ಜಲಂಧರನ ಸತಿಯಾದ ಬೃಂದೆಯಂ ಸುಟ್ಟ ಸುಡುಗಾಡಿನಲ್ಲಿ ಪಾರದ್ರೋಹಕ್ಕೆಳಸಿ ವಿಷ್ಣುವಾವಗಂ ನೆಲಸಿರ್ಪನಾಗಿ ವಿಷ್ಣುವೇ ಅಮಾಂಗಲ್ಯನೆನಿಸಿದಂ.

"ವೃಂದಾವನಶ್ಮಶಾನಸ್ಥೋ ವಿಷ್ಣುಃ ಪೌರಾಣ ವಾಕ್ಯತಃ" ವಿಷ್ಣುಃ—ನಾರಾಯಣನು, ಪೌರಾಣವಾಕ್ಯತಃ -ಪೌರಾಣವಾಕ್ಯಂಗಳತ್ತಣಿಂದೆ, ವೃಂದಾವನ—ವೃಂದಾವನವೆಂಬ, ಶ್ಮಶಾನ—ಸುಡುಗಾಡಿನಲ್ಲಿ, ಸ್ಥಃ—ಇರುತ್ತಿಹನು) ಇವೇ ಆದಿಯಾದ ವಾಕ್ಯಪ್ರಮಾಣಂಗಳಿಂದೆ ಕೃಷ್ಣನೇ ಅಮಂಗಲನು, ಶಿವನೇ ಮಾಂಗಲ್ಯಸ್ವರೂಪನು, ಕೃಷ್ಣಶಬ್ದಶಿವಶಬ್ದಂಗಳ ಅರ್ಥಂಗಳು ಅದೇ ಪ್ರಕಾರವಿರ್ಪುವಾಗಿ ಶಿವನೊರ್ವನೇ ಮಾಂಗಲ್ಯನೆಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ. ॥೧೯॥

ಪದ ॥ ಪರಮಶಿವನ ಮಹಿಮೆಗಳರಿಯದೆ ದು ।
ಸ್ತರ ಶಂಕೆಗಳನಗಣಿತವ ನೀಂ ಗುಣಿಸಲು ।
ಪರಿಹರಿಪುದು ಪೆಚ್ಚಲ್ಲವೆಮಗೆ ಕೇಳು ।
ಗಿರಿಶನೆ ದೈವವೆಂಬುದಕೆ ದೃಷ್ಟಾಂತವಂ ।
ವಿರಚಿಪೆ ವ್ಯಾಸಪೌರಾಣಿಕನಾದಿಯೊಳ್ ।
ಹರನ ಪೇಳುತ್ತಿರ್ದು ಹರಿದೈವವೆನೆ ಋಷೀ ।
ಶ್ವರರದಂ ನಂಬಲಾರದೆ ಕಾಶಿಯೊಳ್ ವಿಶ್ವೇ ।
ಶ್ವರನ ಮುಂದುಸಿರ್ದೊಡೆ ನಿಶ್ಚಯಮೆನಲಲ್ಲಿ ।
ಗಿರದೆ ತಾನ್ಯದಿ ನದೈವಂ ಕೇಶವಾ ।
ತ್ಪರವೆಂದು ತೋಳೆತ್ತಿನುಡಿಯಲಾಕ್ಷಣ ನಂದೀ ।

ಶ್ವರನು ಸ್ತಂಭಿತವಾದ ತೋಳ್ಗಳಂ ಮುಟಿಯನೆ ।
ಪರಿಕಿಸು ಸ್ಕಾಂದದೊಳ್ ಕಾಶಿಕಾಖಂಡದಿ ।
ವರಕಾಶಿಕಾಖಂಡ ಮುಂತಾದುವಜಿಲ್ಲಿ ।
ಕರಮಂತೆ ಬಹುಸಿದ್ಧವೆಂದು ಬರೆದುದಿಲ್ಲ ।
ಪರತರ ಖತಿಯಿಂದಲಾಗ ವ್ಯಾಸನು ಪದ್ಮೋ ।
ದರನ ಬಳಿಗೆ ಬಂದು ನುತಿಸಲಿಂತೆಂದನು ।
ದುರುಳನೆ ಕೇಳಹಂ ಸರ್ವಜಗತ್ಕರ್ತಾ ।
ಮರುಳುಗೊಂಬರೆ ಯೆಂದು ಮಮಕರ್ತಾ ಮಹೇ ।
ಶ್ವರ ಎನೆ ನಾಣ್ಚಿ ಮರಳಿ ವಿಶ್ವೇಶನ ।
ಭರದಿಂದೆ ಯಸ್ಯಾಸ್ತಿ ಶಕ್ತಿಯಿದಾದಿಯಾ ।
ಗರರೆ ವ್ಯಾಸಾಷ್ಟಕದಿಂ ನುತಿಸಲ್ಕೆ ಶಂ ।
ಕರನತಿಕರುಣಾವೃಷ್ಟಿಯುಸೂಸೆ ನಂದಿಕೇ ।
ಶ್ವರನೊಲ್ದು ತೋಳ್ಗಳಂ ಕೊಟ್ಟನದಕೆ ಸಾಕ್ಷಿ ।
ಯೊರೆವೆನಿತ್ಥಂ ಯಾವತ್ ಸ್ತೌತಿ ಶಂಭುಂ ಮ ।
ಹಬುಷಿಸ್ತಾವನ್ನಂದೀಶಾಂಭವಾತ್ತೆಂದು ತಾಂ ।
ಹರುಷದಿಂ ದೃಕ್ಪ್ರಸಾದಾತ್ತದ್ದೋಸ್ತಂಭಂ ।
ಕರುಣದಿಂ ತ್ಯಕ್ತವಾನೆಂದು ಕಾಶೀಖಂಡ ।
ದುರುವಾಕ್ಯಮುಂಟಾಗಿ ಹರಿದೈವಮಾದೊಡೆ ।
ಕರಗಳೀಯನೆ ವ್ಯಾಸಗೆ ತನಗೆಯೆ ಕರ್ತೃ ।
ಗಿರಿಜೇಶನೆಂಬವನೆ ಬ್ರಹ್ಮವೆನಿಪ್ಪ ।
ಸರಣಿಯದೇಕವಾಗೆ ತನ್ನನುನಂಬಿ ।
ದರಿಗಿಂತು ಕಷ್ಟವಾಗೆ ವೈಷ್ಣವರಿನ್ನು ।
ನರಕಭಾಜನರೆಂಬುದದು ದೃಷ್ಟವಾಗೆ ॥೨೦॥

ನಾನಾಪ್ರಕಾರದಿಂ ತಮ್ಮತಮ್ಮ ಯುಕ್ತಿಚಾತುರ್ಯಸಾಮರ್ಥ್ಯದಿಂ ಗೌತಮಶಾಪವಶದಿಂದನಂತಶಂಕೆಗಳಂ ಶಂಕಿಸುವರಂ ಸರಿಮಾಡಿಕೊಂಬುದೆಮಗುಚಿತಮಲ್ತು. ಹಲವುಪ್ರಕಾರದಿಂ ವಿಷ್ಣುವೇ ಪರಬ್ರಹ್ಮ ಮೆಂದು ಪೇಳ್ವ ಕೆಲವುಶ್ರುತಿವಾಕ್ಯಂಗಳಿಗೆ ತದಂತರ್ಯಾಮಿಪರತ್ವದಿಂ ಶಿವನನೆ ಪೇಳ್ವವೆಂಬುದರ್ಕೆ ದೃಷ್ಟಾಂತಮಂ ಪೇಳುತಿರ್ದಪೆಂ.

"ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ । ಭವಿಷ್ಯನ್ನಾರದೀಯಂ ಚ ಮಾರ್ಕಂಡೇಯಮತಃಪರಂ ॥ ಆಗ್ನೇಯಂ

ಬ್ರಹ್ಮಕೈವರ್ತಂ ಲೈಂಗ್ಯಂ ವಾರಾಹಮೇವ ಚ। ಸ್ಕಾಂದಂ ಚ ವಾಮನಂ ಚೈವ ಮತ್ಸ್ಯಂ ಕೂರ್ಮಂ ಚ ಗಾರುಡಂ ॥ ಬ್ರಹ್ಮಾಂಡಮಿತಿ ಪುಣ್ಯಾನಿ ಪುರಾಣಾನಿ......" ಎಂಬ ಅಷ್ಟಾದಶಪುರಾಣಂಗಳಂ ಶಿವಪರವಾಗಿ ಪೇೞುತಿರ್ದ ವ್ಯಾಸಂಗೆ ದೂರ್ವಾಸನ ಶಾಪದಿಂದಜ್ಞಾನಂ ಕವಿಯಲು ಪದ್ಮಪುರಾಣದ ಪೂರ್ವಭಾಗಮಂ ಶಿವಪರವಾಗಿ ಪೇೞುತಿರ್ದು ಉತ್ತರಭಾಗದಲ್ಲಿ ವಿಷ್ಣುವೇ ದೈವವೆಂದು ಪೇೞುತ್ತಿರಲು ಋಷಿಗಳೆಲ್ಲರುಂ ನಂಬಲಾರದೆ ಕಾಶಿಯೊಳ್ ವಿಶ್ವೇಶ್ವರನ ಸನ್ನಿಧಿಯೊಳ್ ನುಡಿಯೆನಲಾ ತೆಱದಿಂ ವಿಶ್ವೇಶ್ವರನ ಮುಂದೆ ತೋಳೆತ್ತಿ "ನದೈವಂ ಕೇಶವಾತ್ಪರಂ" (ಕೇಶವನತ್ತಣಿಂದೆ ಉತ್ಕೃಷ್ಟವಾದ ದೈವಮಿಲ್ಲ) ವೆಂದು ನುಡಿಯಲು ತತ್‌ಕ್ಷಣದಲ್ಲಿಯೇ ಸ್ತಂಭಿತವಾದ ತೋಳ್ಗಳಂ ನಂದೀಶ್ವರಂ ಮುಱಿದು ಪೊಯ್ಯಲು, ನಷ್ಟವಾದ ತೋಳಂ ಬಿಂದುಮಾಧವನ ಬೞಿಗೈದಿ ಮರಳಿಪಡೆದಪೆನೆಂದು ಆ ವಿಷ್ಣುವಿನ ಬೞಿಗೈದಿ ಪಲತೆಱದಿಂ ಸ್ತೋತ್ರಂ ಮಾಡಲು ಬಿಂದುಮಾಧವನತಿಕೋಪಾಟೋಪದಿಂದೆ ಇಂತೆಂದಂ:—

ಸ್ಕಾಂದೇ ಕಾಳಿಕಾಖಂಡೇ– "ಯಜ್ಞಕರ್ತಾ ಚ ದೇವೇಂದ್ರೋ ವೇದಕರ್ತಾ ಚ ವಾಕ್ಪತಿಃ । ಅಹಂ ಸರ್ವ ಜಗತ್ಕರ್ತಾ ಮಮಕರ್ತಾ ಮಹೇಶ್ವರಃ" (ದೇವೇಂದ್ರಃ—ದೇವೇಂದ್ರನು, ಯಜ್ಞ—ಸಮಸ್ತ ಯಜ್ಞಂಗಳ್ಗೆಯುಂ, ಕರ್ತಾಚ—ಕರ್ತೃವಾಗಿಹನು, ವಾಕ್ಪತಿಃ—ಬ್ರಹ್ಮನು, ವೇದಕರ್ತಾಚ—ಸಮಸ್ತ ವೇದಂಗಳ್ಗೆ ಕರ್ತೃವಾಗಿಹನು, ಅಹಂ—ನಾನು, ಸರ್ವಜಗತ್ಕರ್ತಾ—ಸಮಸ್ತ ಜಗತ್ತುಗಳ್ಗೆಯುಂ ಕರ್ತೃವಾಗಿಹೆನು, ಮಮ—ಎನಗೆ, ಮಹೇಶ್ವರಃ—ಮಹಾದೇವನು. ಕರ್ತಾ—ಒಡೆಯನಾಗಿಹನು,) "ತಮೇವ ಶರಣಂ ಗಚ್ಛ" (ಆ ಮಹಾದೇವನನೇ ಮಱೆಹೊಗು) ಇಂತೆಂದು ಪೇೞಿ ಕಳುಹಿಸಲಾಗಿ ಮರಳಿ ವಿಶ್ವೇಶ್ವರನ ಸನ್ನಿಧಿಗೈದಿ "ಯಸ್ಯಾಸ್ತಿ ಶಕ್ತಿಃ" ಎಂಬ ಶ್ಲೋಕಮಾದಿಯಾಗಿ "ನ ವಜ್ರಚಕ್ರಾಂಕಸರೋರುಹಾಂಕಂ ಲಿಂಗಾಂಕಿತಂ ಯಸ್ಯ ಜಗದ್ವಿಗಾಂಕಂ । ಹಸ್ತೇಪ್ರಬದ್ಧೇ ಸತಿ ಕಂಕಣೇನ ಪಶ್ಯಂತಿ ಮೂಢಾಃ ಖಲುದರ್ಪಣೇನ" (ಜಗತ್—ಚರಾಚರ ಮುಂತಾದ ಸಮಸ್ತಲೋಕಂಗಳೆಲ್ಲವುಂ, ವಜ್ರ—ದೇವೇಂದ್ರನ ವಜ್ರಾಯುಧದ, ಅಂಕಂ—ಮುದ್ರೆಯುಳ್ಳದ್ದಾಗಿ,

ನ—ಇಲ್ಲ, ಚಕ್ರ—ವಿಷ್ಣುವಿನ ಚಕ್ರದ, ಅಂಕಂ—ಮುದ್ರೆಯುಳ್ಳದ್ದಾಗಿ, ನ—ಇಲ್ಲ, ಸರೋರುಹ—ಬ್ರಹ್ಮಂಗೆ ಪೀಠವಾದ ತಾವರೆಯು, ಅಂಕಂ—ಮುದ್ರೆಯುಳ್ಳದ್ದಾಗಿ, ನ—ಇಲ್ಲ. ಮತ್ತೇನಯ್ಯಾ ಎಂದೊಡೆ, ಯಸ್ಯ—ಆವನಾನೊರ್ಬ ಪರಮೇಶ್ವರನ, ಲಿಂಗಾಂಕಿತಂ—ಲಿಂಗದ ಅಂಕಿತವು, ಭಗಾಂಕಿತಂ-ಪುಲ್ಲಿಂಗ ಸ್ತ್ರೀಲಿಂಗ ನಪುಂಸಕಲಿಂಗವೆಂಬ ನಾಮಪರ್ಯಾಯದಿಂ ಸಚರಾಚರ ಮೊದಲಾದ ಸಮಸ್ತ ಜಗತ್ತು ಮೂಱುಲಿಂಗದ ಕುಱುಹಿಡಲ್ಪಟ್ಟಿತು. ಕಂಕಣೇನ—ಕಂಕಣದಿಂದ, ಹಸ್ತೇ—ಹಸ್ತವು, ಪ್ರಬದ್ಧೇಸತಿ—ಕಟ್ಟಲ್ಪಟ್ಟರಲಾಗಿ, ಮೂಢಾಃ—ಮೂಢಾತ್ಮರು, ದರ್ಪಣೇನ—ದರ್ಪಣದಿಂದೆ, ಪಶ್ಯಂತಿಖಲು—ನೋಡುತ್ತಿಹರು. ಮುಂಗೈಯ ಕಂಕಣಕ್ಕೆ ದರ್ಪಣದ ಹಂಗೇತರ್ಕೆಂದಭಿಪ್ರಾಯಂ. ರಾಜನ ಹೆಸರಿನ ಮುದ್ರೆಯಿಂ ರಾಷ್ಟ್ರದಲ್ಲಿ ಎಲ್ಲವುಂ ನಡೆವಂತೆ ಸರ್ವದೇವತಾರಾಜನಾದ ಮಹಾಲಿಂಗದ ಹೆಸರಿನ ಮುದ್ರೆಯೇ ಸಮಸ್ತ ಜಗತ್ತಿನಲ್ಲಿಯುಂ ನಡೆಯುತಿರ್ಪುದದುಕಾರಣಂ ಮಹಾದೇವನೇ ವಿಷ್ಣು ಬ್ರಹ್ಮ ಮೊದಲಾದ ಸಮಸ್ತ ದೇವತೆಗಳ್ಗಂ ಸಮಸ್ತ ಲೋಕಕ್ಕಂ ಒಡೆಯನೆಂಬುದಱಿಯಲ್ಪಟ್ಟಿತು.) ಇಂತೆಂಬ ಶ್ಲೋಕವೇ ಕಡೆಯಾಗಿ ವ್ಯಾಸನು ಬಹುವಿಧದಿಂ ಸ್ತೋತ್ರವಂ ಮಾಡಲು ಮಹಾದೇವಂ ಪ್ರಸನ್ನನಾಗಿ ಮುನ್ನಿನಂತೆ ಅವನ ತೋಳಂ ಕುಡೆಂದು ನಂದೀಶ್ವರಂಗೆ ಬೆಸನನೀಯಲ್ ದಯೆಯಿಂದಿತ್ತಂ. ಅದರ್ಕೆ ಸಾಕ್ಷಿ:—

"ಇತ್ಥಂ ಯಾವತ್ ಸ್ತೌತಿ ಶಂಭುಂ ಮಹರ್ಷಿ ಸ್ತಾವನ್ನಂದೀ ಶಾಂಭವಾದ್ದೃಕ್ಪ್ರಸಾದಾತ್ । ತದ್ದೋಸ್ತಂಭಂ ತ್ಯಕ್ತವಾನ್......"

ಮಹರ್ಷಿಃ-ಋಷಿಶ್ರೇಷ್ಠನಾದ ವ್ಯಾಸನು, ಇತ್ಥಂ—ಈಪ್ರಕಾರದಲ್ಲಿ, ಯಾವತ್—ಎಲ್ಲಿಯಪರ್ಯಂತರ, ಶಂಭುಂ—ಮಹಾದೇವನನ್ನು, ಸ್ತೌತಿ—ಸ್ತೋತ್ರವಂ ಮಾಡಿದನು, ತಾವತ್—ಅಷ್ಟಱೊಳಗೆ, ಶಾಂಭವಾತ್—ಶಂಭುಸಂಬಂಧವಾದ ದೃಕ್ಪ್ರಸಾದಾತ್—ನೇತ್ರಂಗಳ ಪ್ರಸನ್ನತೆಯತ್ತಣಿಂದೆ, ನಂದೀ—ನಂದಿಕೇಶ್ವರನು, ತತ್—ಆವ್ಯಾಸನ, ದೋಸ್ತಂಭಂ—ತೋಳಿನ ಸ್ತಂಭವನ್ನು, ತ್ಯಕ್ತವಾನ್—ಬಿಟ್ಟನು.)

ಎಂದು ಕಾಶಿಕಾಖಂಡದಲ್ಲಿ ಪೇೞಿತಾಗಿ, 'ಸರ್ವೇವೇದಾಯತ್ಪ

ದವಾಮನಂತಿ" ಎಂಬ ಶ್ರುತಿಪ್ರಮಾಣದಿಂದಲೂ "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ ಶಿವ ಏಕೋ ಧ್ಯೇಯಃ ಶಿವಂಕರಃ ಸರ್ವ ಮನ್ಯ ತ್ಪರಿತ್ಯಜೇತ್" ಎಂದು ಐಕ್ಯಾವಧಾರಣ ದ್ವೈತನಿಷೇಧಂಗಳಿಂದೆ ರುದ್ರನೊರ್ವನೇ ದೇವನು, ಶಿವನೊರ್ವನೇ ಧ್ಯಾನಕ್ಕೆ ಕಾರಣನು, ಉಳಿದ ಸಮಸ್ತ ದೇವತೆಗಳೆಂ ಬಿಡಲ್ತಕ್ಕುದು ಎಂದು ಪೇಳಿದ ಅಥರ್ವಶಿಖಾ ವಾಕ್ಯದಿಂದಲೂ, ಸಮಸ್ತ ವೇದಂಗಳೆಲ್ಲಮುಂ ಮಹಾದೇವನನೇ ಪೇಳ್ವು ವೆಂಬುದರ್ಕೆ ಇದೇ ದೃಷ್ಟಾಂತವೆಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ. ॥೭೦॥

ಪದ ॥ ಹರಿಬಿದ್ದ ಭವಗಳನಿನ್ನು ಕೇಳೆಲೊ ದುಷ್ಟ ।
ನರಸಿಂಹನಾಗಿ ಹಿರಣ್ಯಾಕ್ಷನ ಕೊಂದು ।
ಭರದೆ ರಕ್ತವ ಪೀರ್ದು ಸುರೆಗುಡಿದಂದದಿ ।
ವರಸುರನಾಗಲೋಕಧವರ ಪೀಡಿಸು ।
ತಿರೆ ವೀರಭದ್ರನಂ ಕರೆದು ಶಂಕರನಾಗ ।
ದುರುಳ ನೃಸಿಂಹನ ತೀಳುಹು ಕೇಳದೊಡೆ ಸಂ ।
ಹರಿಸಿ ತನ್ನುಖಚರ್ಮಂಗಳಂ ತಹುದೆಂದು ।
ಹರನು ನೇಮಿಸಿ ಕಳುಹಲು ಬಂದಾತೆರದಿಂದೆ ।
ಪರಮೇಶನ ಮಹಿಮೆಗಳನೊರೆದು ಸುಖ ।
ಮಿರು ಲೋಕದುಪಹತಿ ಬೇಡೆಂದು ಬೆಸಸಲು ।
ಬ್ಬರಿಸಿ ಘೂರ್ಮಿಸುತಾನೆ ಕರ್ತನೆಯುಲ್ಲದೆ ।
ಪೆಱನೊರ್ವನುಂಟೆ ಪೋಗಲ್ಲದಿರ್ದೊಡೆ ನಿನ್ನ ।
ಹರಣವ ಕೊಂಬೆನೆನಲು ಕೇಳ್ದು ವೀರೇ ।
ಶ್ವರನಾಗ ಪ್ರಳಯಕಾಲದ ವಹ್ನಿ ಕೆರಳ್ದಂತೆ ।
ಶರಧಿಗಳುಕ್ಕಿ ಹರಿಯಲಾರ್ಭಟಿಸುತೆ ।
ಬಱಸಿಡಿಲಗಣಿತರೂಪಾಂತುದೋ ಎನೆ ।
ಶರಭರೂಪಾಂತು ನೃಸಿಂಹನಂ ಪಿಡಿಯುತಂ ।
ಬರಕೆ ಪಾಱುತೆ ಬಿಸುಡುತೆ ಮತ್ತೆ ಪಿಡಿಯುತೆ ।
ಚರಣದಿಂದೊದೆದೆರ್ದೆಯನು ಸೀಳಿ ರಕ್ತವ ।
ನುರುಭೂತವೇತಾಳ ಶಾಕಿನಿ ಡಾಕಿನಿ ।
ಋರಿಗಾತ್ತಣಮನಾಗಿಸುತೆಮನಂ ಕೊಂದು ।

ಶರಿರದ ಚರ್ಮರ್ವವುಬಿಂಗಳಂ ತಂದಿಂದು ।
ಧರಗಿತ್ತನು ಋಗ್ವೇದವಪೂರ್ವಸೋಃ ।
ಶರಭಾಖ್ಯ ಋಷಿಬಂಧವೇ ಯೆನೆ ಲೈಂಗ್ಯದೊಳ್ ।
ಹರಿಸದಿಂದಪಹೃತ್ಯ ಹರೇಃ ಪ್ರಾಣಾ ।
ಶರಭಸ್ಸುರಪೂಜಿತಸ್ಸಿಂಹಾಜಿನಾಂ ।
ಬರೋ ಭೂತ್ವಾ ಜಗಾಮ ಸಮುಥಾಗತವೆನೆ ।
ಪರಿಕಿಸು ಶೈವಸ್ಕಾಂದಾದಿಗಳಂ ಶ್ರುತಿ ।
ಗಿರದುಪಬೃಂಹಣವು ತಾವಾಗುಸುರ್ದಿರೆ ।
ನರಹರಿಯ ಪ್ರಾಣವು ವೀರೇಶನಿಂ ।
ಹರಿಸಿ ಬಿಟ್ಟುದು ಸಿದ್ಧವು ನರಹರಿಪೇಳ್ವಿ ।
ಶರಭಾಷ್ಯೋತ್ತರವದು ವರ್ತಿಸುತಿರೆ ।
ಸರಸಿಜಾಂಬಕನೆಂತು ದೈವವೆಂಬಿರಿ ನೀವು ॥೨೧॥

ವಿಷ್ಣುವಿನ ಮನೆಯ ದ್ವಾರಪಾಲಕಂಗೆ ಒಂದಾನೊಂದು ಶಾಪವಶದಿಂದೆ ನೂಱುಜನ್ಮದಲ್ಲಿ ಹಿತನಾಗಿ ಜನಿಸುವಿಯೋ, ಮೂಱುಜನ್ಮದಲ್ಲಿ ಶತ್ರುವಾಗಿ ಉದ್ಭವಿಸುವಿಯೋ ಎಂದು ವಿಷ್ಣು ಕೇಳಲಾಗಿ ಮೂಱುಂ ಜನ್ಮದಲ್ಲಿ ಶತ್ರುವಾಗಿ ನಿನ್ನೊಡನೆ ರಣವನೆಸಗಿ ನಿನ್ನಿಂದೆ ಮೃತಿಯೊಂದಿ ಶೀಘ್ರದಲ್ಲಿ ನಿನ್ನ ಸಮೀಪಸ್ಥನಾದೇನು ಎಂದು ಹೇಳಿ ಹಿರಣ್ಯಾಕ್ಷನೆಂಬ ಅವತಾರವನೆತ್ತಿ ವಿಷ್ಣುವಿನ ನಾಮವಂಕೇಳಲಾಗದೆಂದು ಪ್ರತಿಜ್ಞೆಯಂ ಮಾಡಿಕೊಂಡಿರಲು, ಪ್ರಹ್ಲಾದನೆಂಬ ಮಗನಂ ಬಾಲ್ಯದಲ್ಲಿ ಓದಿಸುವುದರ್ಕೆ ಕಟ್ಟುಮಾಡಿ "ಓಂನಮಶ್ಶಿವಾಯ" ಎಂಬ ಪಂಚಬ್ರಹ್ಮಮಂತ್ರಮಂ ಬರೆದು ಕೊಡಲು, ಅವಂ "ಓಂ ನಮೋ ನಾರಾಯಣಾಯ" ಎಂದು ಪಠಿಸುತಿರಲು, "ನಮಶ್ಶಿವಾಯಚ ಶಿವತರಾಯಚ" ಎಂಬ ಯಜುರ್ವೇದಪ್ರಸಿದ್ಧವಾದ ಪಂಚಾಕ್ಷರಿಯಂ ಬಿಟ್ಟು ನಮ್ಮ ಶತ್ರುವಾದ ಹರಿಯ ನಾಮಸ್ಮರಣೆ ಬೇಡೆಂದು ಪುತ್ರಂಗೆ ಬುದ್ಧಿ ಹೇೞಲು, ಹರಿಯೇ ದೈವಮಲ್ಲದೆ ಹರನು ದೈವಮಲ್ಲೆಂದು ಪಿತನೊಡನೆ ಅಸತ್ಯೋಕ್ತಿಯಂ ನುಡಿಯಲು, ಹರಿಯನಿಲ್ಲಿ ತೋರ್ದಪೆಯ? ಎನಲು, ನಿನ್ನ ಓಲಗಸಾಲೆಯೊಳ್ ನಟ್ಟರ್ದ ಉಕ್ಕಿನ ಕಂಭದಲ್ಲಿಯೇ ತೋರ್ದಪೆನೆಂದು ಹರಿಯಂ ಸ್ಮರಿಸಲು, ಅವನಂಕೊಲ್ಲುವುದರ್ಕೆ ತನ್ನೊಡನೆ ವಿರೋಧಿಸಿದುದೇ ಸಮಯವೆಂದು

ಶಿವನವೈಭವಮೆಯುಂ ನೋಡದೆ ಶತ್ರುಸಂಹಾರವೇ ಮುಖ್ಯವೆಂದು ಆ ಸ್ತಂಭದೊಳ್ ನೃಸಿಂಹನಾಗಿ ಜನಿಸಿ ಹಿರಣ್ಯಾಕ್ಷನಂ ಸೀಳ್ದುಬಿಡಲು, ಮೂಱು ಜನ್ಮದಲ್ಲಿ ವಿರೋಧಿಯಾಗಿ ಪುಟ್ಟದವನೆಂದು ಮುನ್ನವೆ ಬೇಡಿಕೊಂಡಿರ್ದನಾಗಿ ತನ್ನೊಡನೆ ವಿರೋಧಿಸಿದವನಂ ಕೊಲ್ವೆಡೆಯಲ್ಲಿ ತಾಂ ಬೇಡಿಕೊಂಡ ಇಷ್ಟಾರ್ಥಂ ತನಗೆ ಸಿದ್ಧಿಸಿತೆಂದು ಮಹಾದೇವನವನಂ ವಿಚಾರಿಸದಿರಲು, ಶಿವನಂ ನಿಂದಿಸಿದ ಪ್ರಹ್ಲಾದಂಗೆ ಸಹಾಯಮಾದ ಪಾಪವಶದಿಂ ಕೇವಲತಮೋಗುಣಂ ನೃಸಿಂಹಂಗೆ ಮುಂದುಗೊಂಡು ಸಮಸ್ತಲೋಕಂಗಳಂ ಪೀಡಿಸುತಿರಲು, ವೀರಭದ್ರೇಶ್ವರನು ಶರಭಾವತಾರಮಂ ತಳೆದು ಶಿವಮಂತ್ರಮಹತ್ವಮಂ ನೋಡದೆ ಸ್ವಕಾರ್ಯಾರ್ಥಿಯಾದ ಪಾಪಶರೀರಿಯಂ ಪಾದಂಗಳಿಂದೊದೆದು ಕೆಡಹಿ ಅತಿಭೀಕರಮಾದ ರಣಮೆಸಗಿ ಕೊಂದು ನೃಸಿಂಹನ ಚರ್ಮಮಂ ಸೀಳ್ದು ಮಸ್ತಕಮಂ ತುಂಡಿಸಿ ಅವನ ಚರ್ಮಮುಖಂಗಳಂ ಪರಮೇಶ್ವರಂಗೆ ವಸನಾಭರಣಂಗಳನೆಸಗಿದನು.

ಇದಕ್ಕೆ ಸಾಕ್ಷಿ—ಋಗ್ವೇದದಲ್ಲಿ:—'ಅಪಾವೃಣೋಶ್ಚರಭಾಯ ಋಷಿಬಂಧವೇ'' (ಋಷಿಬಂಧವೇ--ಋಷಿಗಳ್ಗೆಬಂಧುವಾಗಿರ್ದಂಥ, ಶರಭಾಯ—ಶರಭರೂಪವ ಧರಿಸಿದಂಥವನಿಗೋಸ್ಕರ, ಅಪಾವೃಣೋಃ—ಓಲೈಸುವೆವು.) "ಅಪಹೃತ್ಯಹರೇಃ ಪ್ರಾಣಾನ್ ಶರಭಸ್ಸುರಪೂಜಿತಃ । ಸಿಂಹಾಜಿನಾಂಬರೋಭೂತ್ವಾ ಜಗಾಮ ಸಯಥಾಗತಂ'' (ಸುರಪೂಜಿತಃ—ದೇವತೆಗಳಿಂದೆ ಪೂಜಿಸಿಕೊಳ್ಳಲ್ಪಟ್ಟ, ಶರಭಃ—ವೀರಭದ್ರನು, ಹರೇಃ—ನೃಹರಿಯ, ಪ್ರಾಣಾನ್—ಪ್ರಾಣಗಳನ್ನು, ಅಪಹೃತ್ಯ—ಸಂಹರಿಸಿ, ಸಿಂಹ—ನೃಸಿಂಹನ, ಅಜಿನ—ಚರ್ಮವೇ, ಅಂಬರಃ—ಹೊದಿಕೆಯಾಗುಳ್ಳವನು, ಭೂತ್ವಾ—ಆಗಿ, ಯಥಾಗತಂ—ಕೈಲಾಸಮಾರ್ಗವಂ ಬಱಿವಿಡಿದು, ಜಗಾಮ—ಎಯ್ದಿದನು)

ಈರೀತಿಯಲ್ಲಿ ಆ ಋಗ್ವೇದದ ಶ್ರುತಿಗೆ ಕಾಳಿಕಾಖಂಡ ಮೊದಲಾದುವಱಲ್ಲಿ ಉಪಬೃಂಹಣವಾಕ್ಯಂಗಳಂ ಬಹು ಪ್ರಸಿದ್ಧವಾಗಿ ಪೇಳ್ವುದಱಿಂ ಬರೆದುದಿಲ್ಲ.

"ನಮೋ ನೃಸಿಂಹ ಸಂಹರ್ತ್ರೇ ವಿಷ್ಣು ಮಾಯಾಂತಕಾರಿಣೇ"

ಇಂತೆಂದು ನೃಸಿಂಹನೇ ಶರಭಾಷ್ಟೋತ್ತರಮಂ ಪೇಳ್ದನಾಗಿ ವಿಷ್ಣು ವಿಂಗೆ ಸ್ವಾತಂತ್ರ್ಯವಿಲ್ಲವೆಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ.

ಪದ ॥ ವೀರಭದ್ರನು ದಕ್ಷನ ಯಜ್ಞರೂಪಾಂತ ।
ನಾರಾಯಣನ ವಧಿಸಿದುದ ಕೇಳು ಸ ।
ವೀರೋದಕ್ಷಸಾವನೋವಿಯುಸ್ತ್ಸ್ತಂಭ ।
ವಾರಯೆ ರೋದಸಿಯೆನೆ ಋಗ್ವೇದದೊ ।
ಳಾರೀತಿಯಿಂದೆ ಯಜುರ್ವೇದದೆ ನಮ ।
ಶ್ಶೂರಾಯುಚಾವಭಿಂದತೇಚನವ್ಯಸ್ತ್ಸಕ್ಷ ।
ದ್ಭ್ಯೋರಥಕಾರೇಭ್ಯಶ್ಚವೋ ನಮೊ ಎನೆ ।
ವೀರಭದ್ರೋವಮಹಾತೇಜಾ ಎಂದಾದಿಯಿಂ ।
ದೋರಂತುಪೇಂದ್ರೇಂದ್ರಾನಲಾದೀನಾಮ ।
ಪಾರದೇವಾನಾಮಂಗತಕ್ಷಕಯೆಂದು ।
ಸಾರಶೈವದವಾಯುವೀಯಸಂಹಿತೆ ಶ್ರುತಿ ।
ವಾರಕುಪಬೃಂಹಣವಾಗಿ ಪೇಳ್ ಸ್ಮ ।
ರಾರಿಯ ನಿಂದಿಸಿ ದಕ್ಷಯಜ್ಞವ ಮಾಡೆ ।
ಶೌರಿಬ್ರಹ್ಮೇಂದ್ರಾದಿಮನುಮುನಿಗಳು ಭವ ।
ದೂರನಂ ಮಱದಲ್ಲಿಗೈತಂದಿರೆ ಗಿರಿ ।
ಜಾರಮಣನು ಘುಡಿಘುಡಿಸುತೆ ಪಣೆಗಣ್ಣೊಳ್ ।
ವೀರಭದ್ರನ ಪಡೆಯಲ್ ಭಯಂಕರಮಾಗೆ ।
ಕ್ರೂರರೂಪಾಂತು ಸಹಸ್ರಮುಖಂಗಳಿಂ ।
ದಾರುಣವೆಸಗುತೆ ದ್ವಿಸಹಸ್ರಭುಜಗಳಿಂ ।
ಘೋರರುದ್ರರು ಅಗಣಿತಕೋಟಿ ಪಿಂತಿರೆ ।
ತೋಱಬಿಡುವೆನು ಬ್ರಹ್ಮಾಂಡಕೋಟಿಗಳನ ।
ದಾರು ನಿಮಗೆ ಮಲೆತಿಹರು ಪೇಳೆನಲಹಂ ।
ಕಾರದಿಂದಿಹ ದಕ್ಷನಸಹಾಯಿಗಳಾದ ।
ಶ್ರೀರಮಣಾದಿಗಳನೆ ವಧಿಸಲು ಹೊಂ ।
ಕಾರರವದೆ ನಡೆಯಲು ದೆಸೆ ನಡುಗಲು ।
ಭೋರನೆ ಬಂದು ದಕ್ಷನ ತಲೆಯಂ ಕುಟ್ಟ ।
ಭೂರಿಭೂತಗಳಗ್ನಿ ಕುಂಡದೊಳ್ಕಾತ್ರಿಸೆ ।
ಸೌರಸಾಕ್ಷನು ಮೃಗವಾಗಿಯೋಡುತ್ತಿರೆ ।

ಹಾಜಿಲೆಚ್ಚನು ತಲೆಯನು ಬಾಣದಿಂದಾಗ ।
ವೀಜಿದ ಸುರಮನುಮುನಿಗಳ ಕೊಲನೆ ಪು ।
ರಾರಿಗೆ ಬ್ರಹ್ಮೇತಿಯು ಪೊಂದಿತೆ ಮುರ ।
ವೈರಿಗಿನಿತು ವ್ಯತಿಯುಂ ಪೇಳುತ್ತಿರೆ ।
ಹಾರೈಪಮನಿರ್ನೀತಿಯು ಸಲ್ಲದು ವೇದ ।
ಪೌರಾಣವೀರಿತಿಯು ಪೇಳುತ್ತಿರೆ ।
ನಾರಕಿಗಳಿಗೆ ನರಕವತಿಪ್ರೀತಿಯು ॥೨೨॥

ವೀರಭದ್ರನು ದಕ್ಷನ ಯಜ್ಞನಾರಾಯಣನಂ ಸಂಹರಿಸಿದುದರ್ಕೆ ಶ್ರುತಿ—"ಸ ವಿರೋ ದಕ್ಷ ಸಾದನೋ ಶಯಂತಸ್ತಂಭರೋದಸೀ" (ದಕ್ಷಸಾದನಃ—ದಕ್ಷನಂ ಜಯಿಸಿದಂಥ, ಸ ವೀರಃ—ಆ ವೀರಭದ್ರನು, ವಿಯಸ್ತಸ್ತಂಭರೋದಸೀ—ದಕ್ಷಾಧ್ವರಸಂಹಾರಕಾಲದಲ್ಲಿ ಯುದ್ಧಕ್ಕೆ ಅಭಿಮುಖರಾದಂಥ, ಓಡುತಿರ್ದ ಸ್ವರ್ಗಭೂಲೋಕಂಗಳಲ್ಲಿರ್ದ ಸಮಸ್ತ ದೇವತೆಗಳ ಕರಸ್ತಂಭವನ್ನು ಮಾಡಿದನು.) ಎಂಬುದಭಿಪ್ರಾಯ. ಇಂತೆಂದು ಋಗ್ವೇದವು ಪೇಳುತ್ತಾಗಿ; ಮತ್ತಂ

ಯಜುರ್ವೇದದಲ್ಲಿ "ನಮಶ್ಶೂರಾಯಚಾ ವಭಿಂದತೇಚ ನಮಸ್ತಕ್ಷದ್ಭ್ಯೋ ರಥಕಾರೇಭ್ಯಶ್ಚ ವೋ ನಮಃ" (ಶೂರಾಯಚ—ಅಸಹಾಯಶೂರನಾದ, ಅವಭಿಂಟತೇಚ—ಗರ್ವಿತರ ಹೃದಯಂಗಳಂ ಭೇದಿಸುವ, ನಿನಗೋಸುಗ, ನಮಃ—ನಮಸ್ಕಾರವು, ತಕ್ಷದ್ಭ್ಯಃ—ಗರ್ವಿತರಾದ ದೇವತೆಗಳ ಅವಯವಂಗಳಂ ಛೇದಿಸುವ, ರಥಕಾರೇಭ್ಯಃ—ದಕ್ಷಸಂಹಾರತ್ರಿಪುರಸಂಹಾರಕಾಲಂಗಳಲ್ಲಿ ರಥಂಗಳಂ ನಿರ್ಮಿಸಿಕೊಡುವ ರುದ್ರರಿಗೋಸ್ಕರ, ನಮಃ—ನಮಸ್ಕಾರವು) ಎಂದುದಾಗಿ "ನಮಸ್ತಕ್ಷದ್ಭ್ಯಃ" ಎಂದು ಪೇಳ್ವ ಶ್ರುತಿವಾಕ್ಯಕ್ಕೆ ಶೈವಪುರಾಣದ ವಾಯುವೀಯಸಂಹಿತೆಯಲ್ಲಿ ಉಪಬೃಂಹಣಂ ಪೇಳುತಿರ್ದಪುದು:— "ವೀರಭದ್ರೋಮಹಾತೇಜಾ ಹಿಮಕುಂದೇಂದುಸನ್ನಿಭಃ । ಭದ್ರಕಾಳೀಪ್ರಿಯೋನಿತ್ಯಂ ಮಾತೃಣಾಮಭಿರಕ್ಷಕಃ । ಉಪೇಂದ್ರೇಂದ್ರಾನಲಾದೀನಾಂ ದೇವಾನಾಮಂಗತಕ್ಷಕಃ" (ಮಹಾತೇಜಾಃ—ಅಧಿಕವಾದ ಪರಾಕ್ರಮವುಳ್ಳಂಥ, ಹಿಮ—ಮಂಜಿನ, ಕುಂದ—ಮೊಲ್ಲೆಯ ಹೂವಿನ, ಇಂದು—ಚಂದ್ರನ, ಸನ್ನಿಭಃ—ಸಮಾನವಾದಂಥ

ಕಾಂತಿಯನುಳ್ಳ, ಭದ್ರಕಾಳೀ—ಭದ್ರಕಾಳಿಗೆ, ಪ್ರಿಯಃ—ವಲ್ಲಭನಾದ, ನಿತ್ಯಂ—ಆವಾಗಲೂ, ಮಾತೃಣಾಂ—ಸಪ್ತಮಾತೃಕೆಯರ್ಗೆ, ಅಭಿರಕ್ಷಕಃ—ರಕ್ಷಣಶೀಲನಾದಂಥ, ವೀರಭದ್ರಃ—ವೀರಭದ್ರನು, ಉಪೇಂದ್ರ—ವಿಷ್ಣು, ಇಂದ್ರ—ದೇವೇಂದ್ರನು, ಅನಲ—ಅಗ್ನಿ, ಆದಿ—ಮೊದಲಾದ, ದೇವಾನಾಂ—ದೇವತೆಗಳ, ಅಂಗ—ಶಿರಸ್ಸು ಹಸ್ತ ನಾಲಗೆ ಮೊದಲಾದುವನ್ನು, ತಕ್ಷಕಃ—ಛೇದಿಸಿದವನು) ಇಂತೆಂದುದಾಗಿ; "ಮೃಗರೂಪೇಣ ಧಾವಂತಂ ವಿಷ್ಣುಂ ಛಿನ್ನಂ ತದಾ ಕರೋತ್" (ಎರಲೆಯ ರೂಪಿನಿಂದೆ ಓಡುತ್ತಿರ್ದ ವಿಷ್ಣುವಿನ ಶಿರಶ್ಛೇದನವನ್ನು ಆಗುಮಾಡಿದನು.) "ವಿಷ್ಣೋಶ್ಶಿರಃಪ್ರತಿಚ್ಛಿಂದ್ಯತತುಷ್ಣ ಮಿತಿ ಪಪಾತ ಶಿರಸ್ತಸ್ಯ ಮಹೀತಲೇ" (ವಿಷ್ಣುವಿನ ಶಿರಸ್ಸು ಕತ್ತರಿಸಿ ಧೊಪ್ಪೆಂದು ಭೂಮಿಯಲ್ಲಿ ಬಿದ್ದುದು.) ಆದಿನಾರಾಯಣನ ಸಂಹಾರವಿಂತೆಂದು ಪೇಳುತ್ತಾಗಿ; ಬ್ರಹ್ಮನ ತಂದೆಯಾದ ವಿಷ್ಣುವಂ, ಬ್ರಹ್ಮನ ಮಗನಾದ ದಕ್ಷನಂ, ಸಂಹರಿಸಿದಲ್ಲಿ ಬ್ರಹ್ಮಹತ್ಯಾದೋಷಂ ಪರಮೇಶ್ವರಂಗೆ ಸಂಭವಿಸಲಿಲ್ಲಾಗಿ, ಬ್ರಹ್ಮಶಿರಚ್ಛೇದನವನೆಸಗಿದಾಗ ಬ್ರಹ್ಮಹತ್ಯಾದೋಷಂ ಸಂಭವಿಸಿತೆಂಬುದು ಪುಸಿ.

ಮತ್ತಂ ಕಾಶೀ ಕ್ಷೇತ್ರದ ಮಹತ್ವಮಂ ಪ್ರಕಟಿಸಲೋಸುಗಮಾಗಿ ಪರಮೇಶ್ವರಂ ಬ್ರಹ್ಮಹತ್ಯಾದೋಷಮನಲ್ಲಿ ಕಳೆದನೆಂಬುವದು ಅತಿಶಯೋಕ್ತಿಯೆಂಬುವುದರ್ಕೆ ದೃಷ್ಟಾಂತಮಂ ಪೇಳುತ್ತಿರ್ದಪಂ:— "ಸ್ತೇಯಂ ಕೃತ್ವಾ ಗುರುದಾರಾಂಶ್ಚ ಗತ್ವಾ ಸುರಾಂ ಪೀತ್ವಾ ಬ್ರಹ್ಮಹತ್ಯಾಂ ಚ ಕೃತ್ವಾ । ಭಸ್ಮಚ್ಛನ್ನೋ ಭಸ್ಮಶಯ್ಯಾಶಯಾನೋ ರುದ್ರಾಧ್ಯಾಯೀ ಮುಚ್ಯತೇ ಸರ್ವಪಾಪೈಃ" (ಸ್ತೇಯಂ ಕೃತ್ವಾ—ಕಳವಂ ಮಾಡಿ, ಗುರುದಾರಾಂಶ್ಚ ಗತ್ವಾ—ಗುರುಸ್ತ್ರೀಗಮನವಂ ಮಾಡಿ, ಸುರಾಂ ಪೀತ್ವಾ—ಸುರಾಪಾನವಂ ಮಾಡಿ, ಬ್ರಹ್ಮಹತ್ಯಾಂ ಚ ಕೃತ್ವಾ—ಬ್ರಹ್ಮಹತ್ಯಾದೋಷವಂ ಮಾಡಿಯುಂ, ಭಸ್ಮಚ್ಛನ್ನಃ—ಭಸ್ಮೋದ್ಧೂಳಿತನಾಗಿರ್ದ, ಭಸ್ಮಶಯ್ಯಾಶಯಾನಃ—ಭಸ್ಮದ ಹಾಸಿಗೆಯಲ್ಲಿ ಮಲಗಿರ್ದ, ರುದ್ರಾಧ್ಯಾಯೀ—ಶ್ರೀ ರುದ್ರಮಂತ್ರ ಜಪವುಳ್ಳಹನು, ಸರ್ವಪಾಪೈಃ—ಮಾಡಬಾರದ ಸಮಸ್ತ ಪಾತಕಂಗಳಿಂದೆ, ಮುಚ್ಯತೇ—ಬಿಡ

ಲ್ಪಡುತ್ತಿಹನು.) ಇಂತೆಂದುದಾಗಿ ಶಿವಂಗೆ ಬ್ರಹ್ಮಹತ್ಯಾದೋಷಂ ಮುನ್ನವೆ ಇಲ್ಲವೆಂಬುದೀಸೂತ್ರದ ಬಹುಶಬ್ದನಿರ್ವಚನಾರ್ಥಂ. ॥೧೦॥

ಪದ ॥ ಮಾರಾರಿಯಾದಿನಾರಾಯಣನನು ಸಂ ।
ಹಾರವ ಮಾಡಿದನದಕಥರ್ವಣದೊಳು ।
ಸಾರಿ ತ್ರಿಯಂಬಕೋ ಬಕೋ ನಾಮ ರುದ್ರೋ ।
ನಾರಾಯಣಶಿರಶ್ಚಂಚುನಾ ಚಕರ್ತ ಎಂ ।
ಬಾರೀತಿಯಿಂ ತ್ರಿಯಂಬಕಾಖ್ಯರುದ್ರಸ್ತು ಎಂ ।
ದೋರಂತೆ ಬಕಪಕ್ಷಿಸ್ವರೂಪಭೃತ್ ತಾ ।
ನಾರಯೆ ರಸೋಕ್ತಿಯಿಂ ಮತ್ಸ್ಯಕೂರ್ಮಾವ ।
ತಾರಸ್ಯ ಶಿರಚ್ಛಿದ ಚಂಚುನಾ ಯೆಂದುರೆ ।
ಸಾರಸ್ಕಂದಾಖ್ಯಪುರಾಣದೊಳಸಿದ್ಧದು ।
ಧೀರ ಸೋಮಕದೈತ್ಯ ವೇದಂಗಳಂ ಕಟ್ಟಿ ।
ವಾರಿಧಿಯಂ ಹೊಕ್ಕಿರೆ ಹರಿ ಮತ್ಸ್ಯಾವ ।
ತಾರವಂ ತಾಳುತೆ ದೈತ್ಯನಂ ಕೊಂದಹಂ ।
ಕಾರದಿಂ ಸರ್ವರುಮಂ ಬಾಧಿಸುತಿರೆ ।
ಗೌರೀಕಾಂತನು ಬಕಪಕ್ಷಿರೂಪಾಂತು ಸಂ ।
ಹಾರವಂ ಮಾಡಿದನೊಂದು ಕಾಲದೊಳಿಳೆ ।
ಯೂರಸಾತಳಕಿಳಿಯಲು ಜಲಕಲ್ಪದೆ ।
ಘೋರೆನೆ ಕೂರ್ಮಾವತಾರದಿಂದತ್ತಿ ಕ ।
ಠೋರವಿಕ್ರಮದ ಗರ್ವದೆ ಶಂಕರನ ಪ ।
ವಾರವಿಂದವ ಮಱೆಯಲು ಬಕವಿಹಗದಾ ।
ಕಾರದಿಂ ಬಂದು ತಚ್ಛಿರವ ತುಂಡಿಸಿ ತನ್ನ ।
ಹಾರಮಧ್ಯದೊಳಾಂತ ಬೋಧಾಯನದಲ್ಲಿ ।
ಹಾರೇ ಕೂರ್ಮಶಿರ ಎಂಬುದು ಮತ್ತೆಯಾ ।
ಧಾರನಾಗುತೆ ನರಕಾಸುರನಂ ಕೊಂದು ।
ಮೂಱುಲೋಕಂಗಳಂ ಕೊಲುತಿರೆ ಹರನ ಕು ।
ಮಾರನಾ ಸೂಕರರೂಪಾಂತ ವಿಷ್ಣುವಂ ।
ಗೋಱುಗೊಳಿಸಿ ಕೊಂದು ಸೀಱ್ದು ಬಿಸುಡನೆ ಗ ।
ಭೀರೋಕ್ತಿಯಿಂದುಸಿದ್ಧದು ಯಜುರ್ವೇದಂ ವಿ ।
ಚಾರಿಸಲಾಖುಸ್ತೇ ರುದ್ರ ಎಂಬುದಱಲ್ಲಿ ।

ಪೌರಾಣಂಗಳಾಅರ್ಥವನುಸಿರ್ವುವು ।
ಶೌರಿಯುನಿಂತು ಹಲವು ಬಾಱಿ ಕೊಲ್ಲನೆ ।
ತಾರಕಾಖಲವಾಸನು ದುರ್ಯೋನಿಯು ।
ಸಾರುವುದೇನು ತಾನು ಅಜ್ಞಾನ ವಿ ।
ಕಾರಿಯಾಗಿರ್ಪನನು ದೈವವೆನ್ನುತ್ತೆ ।
ಹಾರೈಸುವ ನಿಮ್ಮುವನು ಕಾಲನುವಾ ।
ಘೋರನಾರಕದೊಳಗಟ್ಟದೆ ಬಿಡನು ॥೨೩॥

ಮಹಾದೇವನು ಆದಿನಾರಾಯಣನ ಸಂಹಾರವಂ. ಮಾಡಿದುದರ್ಕೆ ಶ್ರುತಿ:— "ತ್ರಿಯಂಬಕೋ ಬಕೋ ನಾಮ ರುದ್ರೋ ನಾರಾಯಣಶಿರ. ಶ್ಛಂಚುನಾ ಚಕರ್ತ" (ಮೂಱುನೇತ್ರಂಗಳುಳ್ಳಂಥ ಮತ್ತಂ ಮೂಱು ದೇವತೆಗಳ್ಗೆ ತಂದೆಯಾದಂಥ ಬಕನೆಂಬ ಹೆಸರನುಳ್ಳ ರುದ್ರನು, ನಾರಾಯಣನ ಶಿರಸ್ಸನ್ನು ಕೊಕ್ಕಿನಿಂದ ಕತ್ತರಿಸಿದನು.) ಇಂತೆಂದು ಅಥರ್ವಣದಲ್ಲಿ ನಾರಾಯಣಶಬ್ದವಾಚಿಯಾಗಿ ಪೇೞುತ್ತಾಗಿ, "ಪೂರ್ವಪದಾತ್ಸಂಜ್ಞಾಯಾಮಗಇತಿ ಣತ್ವವಿಧಾನಾತ್ ಅವತಾರವಾಚೀ ನ ಭವತಿ ಆದಿನಾರಾಯಣ ಏವೇತಿ ನಿಶ್ಚೀಯತೇ" (ನಾರಾಯಣಶಬ್ದವು ಆದಿನಾರಾಯಣನಲ್ಲಿಯುಲ್ಲದೆ, ಅವತಾರವಾಚಿಯುಲ್ಲಿ ಹೊಂದದಾಗಿ ಆದಿನಾರಾಯಣನೆಂದು ನಿಶ್ಚಯಿಸಲ್ಪಟ್ಟಿತು.)

ಮತ್ತಂ ಸ್ಕಾಂದಪುರಾಣದಲ್ಲಿ ಮತ್ಸ್ಯಕೂರ್ಮಾವತಾರಂಗಳಂ ಬಕರುದ್ರಂ ಸಂಹರಿಸಿದನೆಂದು ಪೇೞಿಪಟ್ಟಿತು. ಇದರ್ಕೆ ಸಾಕ್ಷಿ:— "ತ್ರಿಯಂಬಕಾಖ್ಯೋ ರುದ್ರಸ್ತು ಬಕಪಕ್ಷಿಸ್ವರೂಪಭೃತ್ । ಮತ್ಸ್ಯಕೂರ್ಮಾವತಾರಸ್ಯ ಶಿರಶ್ಛಿಚ್ಛೇದ ಚಂಚುನಾ."

ಮತ್ತಂ ಬೋಧಾಯನದಲ್ಲಿ— "ಹಾರೇ ಕೂರ್ಮಶಿರಃ ಕರಾಂಬುಜಲಸತ್ಕಂಕಾಳ ನಾಮಾಯುಧಂ" ಹಾರಮಧ್ಯದಲ್ಲಿ ಕೂರ್ಮನ ಶಿರಸ್ಸನ್ನು ನಾಯಕರತ್ನವಾಗಿ ಧರಿಸಿದನು.

ಮತ್ತಂ ವರಾಹಾವತಾರಕ್ಕೆ ಶ್ರುತಿ— ಯಜುರ್ವೇದೇ:— "ಆಖುಸ್ತೇ ರುದ್ರ ಪಶುಸ್ತಂ ಜುಷಃ" (ರುದ್ರ—ಎಲೆ ರುದ್ರನೆ, ತೇ—ನಿನ್ನ, ಪಶುಃ—ಯಜ್ಞಪಶುವಾದಂಥ, ಆಖುಃ— "ಆಸಮಂತಾತ್‌ಖನತೀತ್ಯಾಖುಃ"

ಎಲ್ಲಕಡೆಯಲ್ಲಿಯೂ ಅಗುಟಿವುದಾದಕಾರಣ ಆಖುವೆನಿಸಿತ್ತು, ಆದಿವರಾಹನೆಂಬುದರ್ಥ. ಆ ಆದಿವರಾಹನನ್ನು, ಜುಷಃ—ಸ್ಕಂದರೂಪಿನಿಂದೆ ಸಂಹರಿಸಿದನು.)

ಮತ್ತಂ ಸ್ಕಾಂದಪುರಾಣದ ಕಾಳಿಕಾಖಂಡದ ಶರಭಾಧ್ಯಾಯದಲ್ಲಿ ಪೇಳಿತ್ತು:— "ಸ್ಕಂಧಶಕ್ತ್ಯಾ ಹತೋ ಯತ್ರ ವರಾಹಾಖ್ಯೋ ಮಹಾಹರಿಃ । ಅದ್ಯಾಪಿ ಸೂಕರಾರೋಹಂ ತೀರ್ಥಂಗಂಗಾತಟೇ ಸ್ಥಿತಂ"

ಮತ್ತಂ "ಇತ್ಯಭಿಧ್ಯಾಯತೋನಾಸಾವಿವರಾತ್ಸಹಸಾನಘ । ವರಾಹಪೋತೋ ನಿರಗಾದಂಗುಷ್ಠಪರಿಮಾಣಕಃ" ಇಂತೆಂದು ಭಾಗವತದಲ್ಲಿ ಬ್ರಹ್ಮನ ನಾಸಿಕವೆಂಬ ಬಿಲದ್ವಾರದಿಂದೆ, ಆ ವರಾಹಾವತಾರನಾದ ವಿಷ್ಣು ಜನಿಯಿಸಿದನೆಂದು ಪೇಳಿತ್ತು. ಆ ವಿಷ್ಣುವಂ ಕುಮಾರಸ್ವಾಮಿ ಕೊಂದನೆಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ ॥೨೩॥

ಪದ । ಬಲಿಯುನಧೋಲೋಕಕೆ ತುಳಿಯುತೆ ಕೃಷ್ಣ ।
ಜಲಜಾಂಡದ ಪರ್ಯಂತ ಬಳೆದು ತನ್ನ ।
ಬಲುಹಿಂದೆ ಲೋಕಕುಪದ್ರವಂ ಮಾಡಲು ।
ಅಳಿಕಲೋಚನನಾಗಳವನ ಪಿಡಿವು ಬೆ ।
ನ್ನೆಲುವ ಮುಱಿದು ಕಂಕಾಳವಾಂತನು ಕೇ ।
ಳಲವೊ ಹರಿಂ ಹರಂತಮನುಯಾಂತಿ ದೇವಾಯೆಂ ।
ದೊಲಿದು ವಿಶ್ವಸ್ಯೇಶಾನಂ ವೃಷಭವೆಂ ।
ದುಲಿವುದು ಯಜುರ್ವೇದವಮದಱಿಂತೆ ಸ್ಕಾಂದದೊಳ್ ।
ನಲಿದು ಹರಿಂ ಹರಂತಂ ವೃಷಭಂ ಎಂದು ।
ಸಲೆ ವಿಶ್ವಸ್ಯೇಶಾನಮೀಶ್ವರಂ ಎಂದು ।
ವಲಮನುಯಾಂತಿ ಸುರಾಸ್ಸರ್ವೇಯೆನೆ ।
ಛಲರೆಯಾಮ್ನಾಯ ಪುರಾಣಂಗಳಂತಿರೆ ।
ಕಲುಹೃದಯನೆ ವಿಷ್ಣು ದೈವವೆಂತಹನು ವಂ ।
ಗಲೆಯಾಜ್ಞಾನಾಜ್ಞೆ ರಹಿತವಾಗಲಣುತೃಣ ।
ಚಲಿಸಲಮ್ಮದು ಪೂರ್ವದೆ ರಾಕ್ಷಸರನು ।
ಗೆಲಿದು ಶಕ್ರಾದ್ಯಷ್ಟ ದಿಕ್ಪಾಲಕರು ತವ್ಮೊಳ್ ।
ಕಲಹವೆಸಗಲು ತಾಂ ಪೆರ್ಚು ನಾಂ ಪೆರ್ಚೆಂದು ।

ಮಲಹರಂ ಯಕ್ಷರೂಪಾಂತಲ್ಲಿಗೈತಂದು ।
ಕೆಲದೊಳಿರಿಸುತೆ ತೃಣವನಿದನಸ್ತ್ರಾಂಗ ।
ಳಲಿ ಖಂಡಿಸಲವನೇ ದೊಡ್ಡವನೆನೆ ।
ಪಲುಮೊಳೆಯುತೆ ವಜ್ರಾಯುಧಮುಂತಾದರ ।
ಗ್ಗಲಿಸಿ ಶಸ್ತ್ರಾಸ್ತ್ರಾಂಗಳಿಂ ಪೊಯ್ದು ಧೃತಿಗುಂದಿ ।
ಚಲಿಸಲಮ್ಮದೆ ಪೋದರು ತೃಣವ ಕೇಳು ।
ಕಲವಕಾರದೊಳು ತಸ್ಮೈತೃಣಂ ನಿದಧಾತಿ ಯು ।
ನಲು ಏವಂ ದೇವೈಸ್ಸವಾರಬ್ಧವೆಂಂ ।
ದೊಲವಿಂದೆ ಸರ್ವಸಾಮರ್ಥ್ಯಮುತ್ಕಟವೆಂ ।
ದುಲಿಯುತೆ ವ್ಯರ್ಥಮಾಸೀದಹೋ ಕೃಷ್ಣ ನಿ ।
ಶ್ಚಲಿತ ಯಕ್ಷಸ್ಯಾಜ್ಞಾಬಲೇನ ವೈ ಯೆಂದು ।
ವಿಲಸಿತ ಶೈವದೊಳುಪಮನ್ಯುವೊಲ್ದು ಕ ।
ಮಲನಾಭಂಗೆ ಪೇಳಿದ ವಾಕ್ಯಮುಂಟಾಗಿ ।
ಹಲವು ಮಾತೇಂ ಯಸ್ಯಾಜ್ಞಯಾ ಇದಂ ಸರ್ವವೆಂ ।
ದುಲಿಯೆ ವೇದಂಗಳಲ್ಲಾ ವಿಶ್ವಾತ್ಮನ ।
ನೆಲೆಯು ತಾಳಿಪುದಲ್ಲಾ ಏಕೋರುದ್ರ ।
ನಲಿ ಭೇದ ಪುಟ್ಟಿತಲ್ಲಾ ವೈಷ್ಣವರೆಲ್ಲ ।
ಮಲಬದ್ಧರಾಗಿ ರೌರವಕೀಡಾದರಲ್ಲ ॥೨೪॥

ವಾಮನಾವತಾರದ ವಿಷ್ಣುವಂ ಸಂಹರಿಸಿದುದರ್ಕೆ ಶ್ರುತಿ— "ಹರಿಂ ಹರಂತಮನುಯಾಂತಿ ದೇವಾಃ ವಿಶ್ವಸ್ಯೇಶಾನಂ ವೃಷಭಂ ಮತೀನಾಂ" (ಹರಿಂ-ವಿಷ್ಣುವನ್ನು, ಹರಂತಂ—ಸಂಹರಿಸಿದಂಥ, ವಿಶ್ವಸ್ಯ—ಲೋಕಕ್ಕೆ, ಈಶಾನಂ—ಒಡೆಯನಹ, ಮತೀನಾಂ—ಬುದ್ಧಿಗಳ್ಗೆ, ವೃಷಭಂ—ಧರ್ಮಪ್ರೇರಕನಹ ಮಹಾದೇವನನ್ನು, ದೇವಾಃ—ದೇವತೆಗಳು, ಅನುಯಾಂತಿ—ಬಳಿವಿಡಿದೈದಿದರು.) ಇಂತೆಂದು ಯಜುರ್ವೇದಂ ಪೇಳಿತ್ತಾಗಿ; ಮತ್ತಂ "ಹರಿಂ ಹರಂತಂ ವೃಷಭಂ ವಿಶ್ವಸ್ಯೇಶಾನಮೀಶ್ವರಂ । ಅನುಯಾಂತಿ ಸುರಾ ಸ್ಸರ್ವೇ ನಮೋ ವಾಕ್ಯೈಸ್ಸಹ ದುದ್ರುತಂ" (ಹರಿಂ—ವಿಷ್ಣುವನ್ನು, ಹರಂತಂ—ಸಂಹರಿಸುವಂಥ, ವೃಷಭಂ—ಧರ್ಮಪ್ರೇರಕನಹ, ವಿಶ್ವಸ್ಯ—ಲೋಕಕ್ಕೆ, ಈಶಾನಂ—ಒಡೆಯನಹ, ಈಶ್ವರಂ—ಪರಮೇಶ್ವರನನ್ನು, ಸರ್ವೇಸುರಾಃ—ಸಮಸ್ತ ದೇವತೆಗಳೂ, ನಮೋವಾಕ್ಯೈಸ್ಸ

ಹ—ನಮಃ ಎಂಬ ವಾಕ್ಯಗಳೊಡನೆ, ದ್ರುತಂ—ಶೀಘ್ರದಲ್ಲಿ, ಅನುಯಾಂತಿ—ಬೞಿವಿಡಿದೈದಿದರು.) ಇಂತೆಂದು ಸ್ಕಾಂದಪುರಾಣಂ ಪೇೞುತ್ತಾಗಿ; ಮತ್ಸ್ಯ ಕೂರ್ಮ ವರಾಹ ನಾರಸಿಂಹ ವಾಮನಾವತಾರಂಗಳೆಂಬುವೈದವತಾರಂಗಳುಂ ಶ್ರುತಿಪುರಾಣಸಿದ್ಧವಾಗಿ ನಿಗ್ರಹಿಸಲ್ಪಟ್ಟುವು; ಕಡವೆಐದವತಾರಂಗಳುಮನುಗ್ರಹಿಸಲ್ಪಟ್ಟುವು.

ಅದುಕಾರಣದಿಂ "ಯೇನ ವಿನಾತೃಣಾಗ್ರಮಪಿ ನ ಚಲತಿ" (ಯೇನ—ಆವನಾನೊರ್ವ ಪರಮೇಶ್ವರನ, ವಿನಾ—ಹೊಱತಾಗಿ, ತೃಣಾಗ್ರಮಪಿ—ಹುಲ್ಲಿನ ತುದಿಯಾದರೂ ಕೂಡ, ನ ಚಲತಿ—ಅಲ್ಲಾಡಿಸುತ್ತಿರದು.) ಇಂತೆಂಬ ಶ್ರುತಿಪ್ರಮಾಣಕ್ಕೆ ದೃಷ್ಟಾಂತಮಂ ಪೇೞುತ್ತಿರ್ದಪಂ. ಸಮಸ್ತದೇವತೆಗಳುಂ ತಾಂ ಪೆರ್ಚು ನಾಂ ಪೆರ್ಚೆಂದನ್ಯೋನ್ಯವಾಗಿ ಯುದ್ಧಂಗಳನೆಸಗುತಿರಲು ಅವರ ಮಧ್ಯದಲ್ಲಿ ಮಹಾದೇವನೊರ್ವನೆ ಯಕ್ಷರೂಪಂ ಧರಿಸಿ ಒಂದು ತೃಣಮಂ ಮುಂದಿರಿಸಿ "ತಸ್ಮೈ ತೃಣಂ ನಿದಧಾತಿ" (ತಸ್ಮೈ—ಆದೇವತೆಗಳಿಗೋಸುಗ, ತೃಣಂ—ಕಡ್ಡಿಯನ್ನು, ನಿದಧಾತಿ—ಮಡಗಿದನು.) ಇಂತೆಂದು ತಲವಕಾರೋಪನಿಷತ್ತಿನಲ್ಲಿ ಪೂರ್ವಾಪರವಿಚಾರಮಂ ವಿಸ್ತರಿಸಿ ಪೇೞ್ದುದಾಗಿ; ಪ್ರಸ್ತುತಕ್ಕೆ ತಕ್ಕಷ್ಟೆ ಬರೆಯಲ್ಪಟ್ಟಿತು.

ಮತ್ತಂ "ಏವಂ ದೇವೈಸ್ಸಮಾರಬ್ಧಂ ಸರ್ವಸಾಮರ್ಥ್ಯಮುತ್ಕಟಂ । ವ್ಯರ್ಥಮಾಸೀದಹೋ ಕೃಷ್ಣ ಯಕ್ಷಸ್ಯಾಜ್ಞಾಬಲೇನ ವೈ" (ಏವಂ—ಇಂತು, ದೇವೈಃ—ಅಗ್ನಿ ವಾಯು ದೇವೇಂದ್ರ ಮುಂತಾದ ದೇವತೆಗಳಿಂದೆ, ಸಮಾರಬ್ಧಂ—ತೋಱಿಸಲ್ಪಟ್ಟ, ಉತ್ಕಟಂ—ಶ್ರೇಷ್ಠವಾದ, ಸರ್ವಸಾಮರ್ಥ್ಯಂ—ಸಮಸ್ತಸಾಮರ್ಥ್ಯವೂ, ಅಹೋಕೃಷ್ಣ—ಎಲೈ ಕೃಷ್ಣನೇ, ಯಕ್ಷಸ್ಯ—ಯಕ್ಷರೂಪಿನ ಮಹೇಶ್ವರನ, ಆಜ್ಞಾಬಲೇನ—ಆಜ್ಞೆಯ ಸಾಮರ್ಥ್ಯದಿಂದೆ, ವ್ಯರ್ಥಮಾಸೀತ್—ವ್ಯರ್ಥವಾಯಿತು.) ಇಂತೆಂದು ಶೈವಪುರಾಣದಲ್ಲಿ ಕೃಷ್ಣಂಗೆ ಉಪಮನ್ಯು ಪೇೞ್ದ ವಾಕ್ಯಮುಂಟಾಗಿ; ಮತ್ತಂ "ಯಸ್ಯಾಜ್ಞಯಾ ಇದಂ ಸರ್ವಂ" ಎಂದು ಶ್ರುತಿ ಪೇೞುತ್ತಾಗಿ; ಸೃಷ್ಟಿಸ್ಥಿತಿಸಂಹಾರತಿರೋಧಾನಾನುಗ್ರಹಂಗ

ಳ್ಗೆ ಮಹಾದೇವನೇ ಕರ್ತೃವಲ್ಲದೆ ಈ ವಿಷ್ಣುಬ್ರಹ್ಮ ಮೊದಲಾದವರೆಲ್ಲರುಂ ಈತನಿಂದೆ ನಿಗ್ರಹಕ್ಕೊಳಗಾದರೆಂಬುದೀಸೂತ್ರದ ಬಹುಶಬ್ದ ನಿರ್ವಚನಾರ್ಥಂ. ||೨೪||

ಪದ || ಹರಿಯು ಭವಂಗಳನೆಣಿಸಲೆನ್ನಳವಲ್ಲ |
ಪರಿಕಿಸು ಹೀನಯೋನಿಗಳಲಿ ಪುಟ್ಟ ತಾ |
ಧರಿಸಲಾರದ ಬಹುದುಃಖಗಳಾಂತುದಂ |
ಸರಸಿಜಭವನ ಗುದದೊಳಧೋಕ್ಷಜನಾದ |
ಪರಿಗಳನಿಂದ್ರಾನುಜನಾಗಿಯುದಿತಿಯು |
ವರದೊಳುದಿಸಿದುದಂ ದತ್ತಾತ್ರೇಯನಾ |
ಗಿರದೆಯತ್ರಿಗೆ ಮಗನಾದುದಂ ಹೀನಕ |
ಬರಿಯ ಯೋನಿಜನಾಗಿ ವ್ಯಾಸಾಖ್ಯನಾದುದಂ |
ಭರದೆ ದೇವಕಿಯ ಜಠರದೊಳು ಕೃಷ್ಣವೆ |
ಸರನಾಂತು ಜನಿಸಿ ಕಿರಾತನಿಂ ಮಡಿದುದಂ |
ವರ ದಶರಥಪುತ್ರನಾಗಿ ರಾವಣನ ಸಂ |
ಹರಿಸಿ ಸತಿಯು ಹೊಜವಡಿಸಿ ತಮ್ಮನ |
ಹರಣಮಂ ಕೊಂಡು ತಾಂ ಸರಯೂನದಿಯೊಳು |
ಮರಣಮನಾಂತುದಂ ಪರಶುರಾಮಾಖ್ಯದಿಂ |
ಶಿರವ ತುಂಡಿಸಿ ಮಾತೆಯಾ ಸಮಸ್ತಕ್ಷತ್ರಿ |
ಯರ ಕೊಂದು ದುಷ್ಟವಿಪ್ರರಿಗೆ ಧರೆಯನಿತ್ತು |
ಶರಧಿಯೊಳ್ ಮುಳುಗಿ ಪ್ರಾಣವ ಬಿಟ್ಟುದಂ ಜಲಂ |
ಧರನಿಡೆ ಶಿಂಶುಮಾರದೊಳು ತಗಲಿ ಮಹಾ |
ಪರಿಭ್ರಮಣೆಯನಾಂತುದಂ ಗೌತಮನು |
ಉರದ ಮೇಲೊದೆಯಲು ಶ್ರೀವತ್ಸವಾಂತುದಂ |
ಶರೀರದೆ ದುರ್ವಾಸನುಚ್ಛಿಷ್ಟವಾಂತುದಂ |
ಪರತರಭೃಗುಶಾಪದಿಂ ಭವವಾಂತುದಂ |
ಹರನ ದಶಾವತಾರದೊಳು ಪೂಜಿಸಿದುದಂ |
ಗಿರಿಶನಂ ಸಾಹಸ್ರಕಮಲದೊಳರ್ಚಿಸಿ |
ಪರಮಸಾಹಸಮುಳ್ಳ ಚಕ್ರಮಂ ಪಡೆದುದಂ |
ಪರಮೇಶಗೆ ಮೇಘರೂಪಿನಿಂ ವಾಹನ |
ಮರರೆ ತಾನಾಗಿ ಸಾಂಬನನು ಪಡೆದುದಂ ಶಂ |

ಕರನ ರಥವನುಕ್ಷರೂಪಿನಿಂದಾಂತುದಂ ।
ಕಠವಾದುಧಂ ಸತ್ತಿಯಾದುದಂ ಗರ್ವಿಸ ।
ಲುರುಕೂಲದಿಂ ತಿವಿದೆತ್ತಿದುದಂ ಗಣೇ ।
ಶ್ವರನಿಂದಲವನ ಕೇಶಂಗಳಂ ಪರಿದುದಂ ।
ಮುರರಿಪು ಬಿಚ್ಚಿಪಾಡುಗಳನೆಣಿಸಲಹಿ ।
ವರಗಸದಳವೆಂದೆನೆ ಪೌರಾಣನಿ ।
ಕರವಿಂತು ಸಾರುವುದೆನಲು ಪರಾತ್ಪರ ।
ತರಮೂರ್ತಿ ತಾಂ ತೋರ್ಪನೆ ನಿಮಗೆ ಭವ ।
ಸರಣಿಯ ಮಾರ್ಗವನೆ ಕೊಟ್ಟುದು ವಿಧಿ ।
ಮರುಳಾಗದಿರು ಸುಮ್ಮನೆ ವೇದಂಗಳೀ ।
ಶ್ವರನ ಕಾಣದೆ ಚಕಿತವಮಭಿಧತ್ತೆಯೆನೆ ॥೨೪॥

ಇವಾದಿಯಾಗಿ ಅನೇಕ ಯೋನಿಗಳಲ್ಲಿ ವಿಷ್ಣು ಜನಿಯಿಸಿದ ವಿವರಂಗಳಂ ಸ್ಕಾಂದಪುರಾಣ, ಆದಿತ್ಯಪುರಾಣ, ವಾಮನಪುರಾಣ, ಗಾರುಡಪುರಾಣ, ಶೈವಪುರಾಣ, ಲೈಂಗ್ಯಪುರಾಣ, ಕಾಶೀಖಂಡ, ಕಾಳಿಕಾಖಂಡ, ಸೂತಸಂಹಿತೆ, ಶಾಂಕರಸಂಹಿತೆ, ಭಾರತ, ಭಾಗವತ, ರಾಮಾಯಣ, ಪಾದ್ಮಪುರಾಣ, ಮೊದಲಾದುವಱಲ್ಲಿ ಬಹು ಪ್ರಸಿದ್ಧವಾಗಿರುವುದಱಿಂದ ಗ್ರಂಥವಿಸ್ತರಮಪ್ಪುದೆಂದು ಬರೆದುದಿಲ್ಲ. ॥೨೪॥

ಪದ ॥ ಧರೆ ವಾರಿತೇಜೋವಾಯುವಾಕಾಶಭಾ ।
ಸ್ಕರ ಚಂದ್ರಾತ್ಮಾಷ್ಟತನುಗಳು ಲೋಕಮಂ ।
ಪರಿವೇಷ್ಟಿಸುತ್ತೆ ಸರ್ವರ ತನ್ನೊಳಗಂತಃ ।
ಕರಿಸಿಕೊಂಡುತ್ಪತ್ತಿಸ್ಥಿತಿಗಳನೆಸಗುತ್ತೆ ।
ಭರದೆ ತನ್ನಲ್ಲಿಯೆ ಲಯವನೊಂದಿಸಿ ಕೊಂಬ ।
ಹರನ ವಿರಾಡ್ರೂಪಗಳಿಂತು ದೃಷ್ಟವಾ ।
ಗಿರುತಿರಲಷ್ಟಮೂರ್ತಿರಹಿರ್ಬುಧ್ನ್ಯೋ ಯೆಂದ ।
ಮರವಾಕ್ಯಮಿರೆ ವಿಗ್ರಹಂ ದೇವದೇವಸ್ಯ ।
ವರ ಜಗದೇತಚ್ಚರಾಚರ ಮೆಂದು ತಾ ।
ನಿರದೆ ತದ್ದೇವಂ ನ ವಿಜಾನಂತಿ ಯೆಂ ।
ಬರರೆ ಶೈವಾದಿ ಪುರಾಣೋಕ್ತಿಯುಂಟಾಗಿ ।
ಪರಮಾದುದೊಂದಿಲ್ಲ ಬ್ರಹ್ಮಾತ್ರರಿಂಗೆ ।

ಹರಿರತ್ರಜಾತಃ ಎನೆ ವಾಸ್ತವದೊಳು ।
ದೊರೆಯು ಪಸರಿನ ಮುದ್ರೆಯು ರಾಷ್ಟ್ರದಲ್ಲಿ ಸಂ ।
ಚರಿಪಂತೆ ಸ್ತ್ರೀಪುನ್ನಪುಂಸಕಲಿಂಗಾಂಕ ।
ವಿುರದಾದುದು ಸಚರಾಚರವಿಶ್ವಮುಂ ।
ಪರಿಕಿಸು ವಿಷ್ಣುಬ್ರಹ್ಮೇಂದ್ರಾದಿ ದೇವಾವು ।
ರರ ಪಸರಿನ ಕುಱುಹುಂಟೆ ಲೋಕಕೆ ಹರಿ
ಸರಸಿಜಭವರು ಪೂಜಿಸಿದರೆಂಬುವಕೆ ನೀ
ಧರಣಿಯೊಳ್ ನೋಡು ರಾಮೇಶ್ವರ ಬ್ರಹ್ಮೇ
ಶ್ವರರೆಂಬ ಲಿಂಗಂಗಳಗಣಿತವಾಗಿಯೆ
ಗಿರಿಶಂಗೆ ಜನನ ಮರಣಮುಂಟಾಗಿರೆ ಪೇೞು
ಪರತರ ಜಲಚಂದ್ರನಂತೆ ವಿಶ್ವದೊಳು ತಾಂ
ಸ್ಫುರಿಸಿ ತೋರ್ಪುದು ನಿಜಭಕ್ತನೊಳುದಕದೊಳ್
ಬೆರೆದ ಉದಕದಂತೆ ತಾನೆ ತಾನಾಗಿ ತೋ ।
ರ್ಪುರುದೀಪ್ತಿಯಾಂತು ರಾಜಿಪುದು ಪರಬ್ರಹ್ಮ ।
ದರವನದೆಂತುಪವಿುಸಲಳವೈ ಮಹೇ ।
ಶ್ವರನ ಲೀಲಾವಿನೋದಂಗಳಿಂತಿರುತಿರೆ ।
ಪರದೈವವೆಂಬುದೆಂತು ದೃಷ್ಟಾಂತಂಗ ।
ಳಿರುತಿರೆ ನಂಬದಿಂತು ವೇದಂಗಳ ।
ನರರೆ ಮೀಱುತೆ ಸಮಂತು ಶ್ರುತಿಯು ಪೇೞ್ ।
ದಿರುತಿಹ ಮಲಿನವಾಂತು ಪಣೆಯೊಳತಿ ।
ನಿರಯಕೀಡಾದರೀಪರಿ ವೈಷ್ಣವರೆಲ್ಲ ।
ಗಿರೀಶನಾಜ್ಞೆಯಂ ಮೀಱಲಾರದಿಂತು ॥೬೬॥

ನಾನಾವಿಧಶಾಸ್ತ್ರಪುರಾಣೇತಿಹಾಸಂಗಳು ಮೊದಲಾದುವಱಲ್ಲಿ ನಾನಾ ಮತಾಂತರಭೇದಂಗಳಂ ಪೇೞ್ವಲ್ಲಿ "ನದೀನಾಂ ಸಾಗರೋ ಗತಿಃ" ಎಂದು ಸಮಸ್ತನದಿಗಳ್ಗೆಯುಂ ಸಮುದ್ರವೇ ಗತಿಯಾದಂತೆ ಸಮಸ್ತ ವರ್ಣಾಶ್ರಮಂಗಳ್ಗೆಯುಂ ಶಿವನೇ ಆದಿಕರ್ತೃವೆಂಬುದಂ ಶ್ರುತದೃಷ್ಟಾನುಮಾನಂಗಳಿಂ ಪ್ರತ್ಯಕ್ಷಪ್ರಮಾಣಂಗಳಿಂ ತೋಱುತಿರ್ದಪಂ.

ಪೃಥಿವ್ಯಪ್ತೇಜೋವಾಯ್ವಾಕಾಶಸೂರ್ಯಚಂದ್ರಾತ್ಮರುಗಳೆಂಬ ಮಹಾದೇವನ ಅಷ್ಟತನುಗಳಿಂದೆ ಸಚರಾಚರದ ಉತ್ಪತ್ತಿಸ್ಥಿತಿನಾಶಂಗಳು ವರ್ತಿಪುವು, ಆತನಾಱುಬುದನಱಯದೆ, ಜೀವನಾಱುಬುದನಱ

ಯುದೆ, ಪಂಚಭೂತಾತ್ಮಕವಾದ ಶರೀರವಾಱೆಂಬುದನಱಿಯದೆ, ಸಮುದ್ರದಲ್ಲಿ ಪುಟ್ಟಿದ ಬುದ್ಬುದಂಗಳು ಸಮುದ್ರಮಯುವಾಗಿಯೇ ತೋರ್ಪಂತೆ ಅಷ್ಟಮೂರ್ತಿಯಾದ ಮಹಾದೇವನಲ್ಲಿ ಪುಟ್ಟಿದ ಸಮಸ್ತ ಪ್ರಾಣಿಗಳುಂ ಅಷ್ಟಮೂರ್ತಿಮಯುವಾಗಿಯೆ ತೋಱುತಿರ್ಪುವು.

"ವಿಗ್ರಹಂ ದೇವದೇವಸ್ಯ ಜಗದೇತಚ್ಚರಾಚರಂ । ತದೇವ ನ ವಿಜಾನಂತಿ ತಾತಂ ವೇಶ್ಯಾಸುತೋ ಯಥಾ" (ಏತಜ್ಜಗತ್—ಈಜಗತ್ತು, ಚರಾಚರಂ—ಚರಾಚರವೊದಲಾದುವೆಲ್ಲಂ, ದೇವದೇವಸ್ಯ—ವಿಷ್ಣು ಬ್ರಹ್ಮದೇವರಿಗೊಡೆಯನಾದ ಪರಮೇಶ್ವರನ, ವಿಗ್ರಹಂ—ಶರೀರವು, ತದೇವ—ಆ ಪರಮೇಶ್ವರನ ಶರೀರಮಾದ ಜಗತ್ತನೆಲ್ಲಮುಂ, ನ ವಿಜಾನಂತಿ—ಅಱಿಯದೆ ಇಹರು, ಅಂತಪ್ಪ ಪರಮೇಶ್ವರನ ಶರೀರಂಗಳಿಂ ತಾಂ ಶರೀರಮಂ ಧರಿಸಿ, ವೇಶ್ಯಾಸುತಃ—ಸೂಳೆಯ ಮಗನು, ತಾತಂ—ತಂದೆಯನ್ನು, ಯಥಾ ನ ಜಾನಾತಿ—ಹೇಗೆ ಅಱಿಯನೋ, ತಥಾ—ಹಾಗೆ, ಪಿತರಂ—ತಂದೆಯಾದ ಮಹಾದೇವನನ್ನು ನ ವಿಜಾನಂತಿ—ಅಱಿಯದಿಹರು.)

"ಉರ್ವೀಸಮೀರಯಜಮಾನಜಲಾನಲಾರ್ಕಸೋಮಾಂಬರಾದಿಭಿರಹೋ ಭವತಸ್ತನೂಭಿಃ । ವ್ಯಾಪ್ತಂ ಸಮಸ್ತಭುವನಂ ಸಮವೇಕ್ಷ್ಯವಿದ್ವಾನ್ ಕುರ್ಯಾನ್ನಕೋತ್ರ ಭಗವನ್ ತ್ವಯಿ ಪಕ್ಷಪಾತಂ" ಭಗವನ್—ಎಲೆ ಷಡ್ಗುಣೈಶ್ವರ್ಯಸಂಪನ್ನನಾದ ಮಹಾದೇವನೇ, ಉರ್ವೀ—ಭೂಮಿ, ಸಮೀರ—ವಾಯು, ಯಜಮಾನ—ಆತ್ಮ, ಜಲ—ಉದಕ, ಅನಲ—ಅಗ್ನಿ, ಅರ್ಕ—ಸೂರ್ಯ, ಸೋಮ—ಚಂದ್ರ, ಅಂಬರ—ಆಕಾಶ, ಇವೇ, ಆದಿಭಿಃ—ಮೊದಲಾಗಿರ್ದ, ಭವತಃ—ನಿನ್ನ, ತನೂಭಿಃ—ಶರೀರಂಗಳಿಂದೆ, ವ್ಯಾಪ್ತಂ—ವ್ಯಾಪಿಸಲ್ಪಟ್ಟ, ಸಮಸ್ತಭುವನಂ—ಸಮಸ್ತ ಲೋಕಂಗಳನು, ಸಮವೇಕ್ಷ್ಯ—ಚೆನ್ನಾಗಿ ನೋಡಿ, ಅತ್ರ—ಈಎಡೆಯಲ್ಲಿ, ಕಃ—ಆವನಾನೊರ್ವ, ವಿದ್ವಾನ್—ಬಲ್ಲವನು, ತ್ವಯಿ—ನಿನ್ನಲ್ಲಿ, ಪಕ್ಷಪಾತಂ—ಪ್ರೀತಿಯನ್ನು, ನ ಕುರ್ಯಾತ್—ಮಾಡಲಱಿಯನು, ನೀನೇ ದೈವವೆಂದು ನಿಶ್ಚಯಿಸುವನೆಂಬುದರ್ಥ.)

ಇಂತೆಂಬ ಮಲ್ಹಣಾಚಾರ್ಯನ ವಾಕ್ಯ ಶೈವಪುರಾಣ ವೊದಲಾದ ವಾಕ್ಯಂಗಳುಂಟಾಗಿ, "ಅಷ್ಟಮೂರ್ತಿರಹಿಬುರ್ಧ್ನ್ಯೋ ಮ

ಹಾಕಾಲೋ ಮಹಾನಟಃ'' ಎಂಬ ಅಮರವಾಕ್ಯಮುಂಟಾಗಿ, ಸಚರಾಚರಮುಂ ಶಿವಸಂಬಂಧಮಾಗಿರ್ಪುದನಱಿಯದೆ ಅನ್ಯದೈವಂಗಳನಱಸುವ ಪಾಪಿಗಳ ಮುಖಮುಂ ನೋಡಲಾಗದು.

"ಬ್ರಹ್ಮಾತ್ರ ಲಿಂಗೇ ಹರಿರತ್ರ ಜಾತಃ ಸುರಾಸುರಾಶ್ಚೈವಮಿಹಾರ್ಚಯಂತಿ । ತಥಾಪಿ ಮೂಢಾನ ವಿಚಾರಯಂತಿ ಕೋವಾಧಿಕೋಪ್ಯಸ್ತಿ ಸಮೋ ಹರಸ್ಯ'' (ಅತ್ರ ಲಿಂಗೇ-ಇಂತಪ್ಪ ವಿಶ್ವರೂಪವಾದ ಮಹಾಲಿಂಗದಲ್ಲಿ, ಬ್ರಹ್ಮಾ-ಬ್ರಹ್ಮನು, ಹರಿಃ-ವಿಷ್ಣುವು, ಜಾತಃ-ಹುಟ್ಟಿದರು. ಸುರಾಸುರಾಶ್ಚೈವ-ದೇವದಾನವಾದಿಗಳೆಲ್ಲರು, ಇಹ-ಈಲೋಕದಲ್ಲಿ, ಏನಂ--ಈ ಲಿಂಗಮೂರ್ತಿಯಾದ ಪರಶಿವನನ್ನು, ಅರ್ಚಯಂತಿ-ಪೂಜಿಸುತಿಹರು, ತಥಾಪಿ-ಹಾಗಾಗಿಯೂ, ಮೂಢಾಃ-ಮೂಢರು, ನ ವಿಚಾರಯಂತಿ-ವಿಚಾರಿಸದೆ ಇದ್ದಾರು, ಹರಸ್ಯ-ಪರಮೇಶ್ವರಂಗೆ, ಕೋವಾ-ಆವನಾನೊರ್ವನು, ಅಧಿಕಃ-ಅಧಿಕನಾದವನು, ಸಮಃ-ಸಮಾನನಾದವನು, ಅಸ್ತಿ-ಉಂಟು? ಸಮಾನನಹನೂ ಇಲ್ಲ, ಅಧಿಕನಹನೂ ಇಲ್ಲವೆಂಬುದರ್ಥ.)

ಎಂದುದಾಗಿ ಅಂತಪ್ಪ ವಿಶ್ವಮಯವಾದ ಅಷ್ಟಮೂರ್ತಿಯಾದ ಮಹಾಲಿಂಗದಲ್ಲಿ ಬ್ರಹ್ಮವಿಷ್ಣುವೇ ಮೊದಲಾದ ದೇವರು ಜನಿಸಿದರೆಂಬುದರ್ಕೆ ದೃಷ್ಟಾಂತಮಾಗಿ ಸಮಸ್ತ ಸಚರಾಚರವಿಶ್ವಮುಂ ಸ್ತ್ರೀಪುನ್ನಪುಂಸಕಲಿಂಗಾಂಕಿತಮಾಗಿಲಿಂಗಚಿಹ್ನೆಯೇ ಮುಖ್ಯಮಾಗಿರ್ಪುದು.

ಇಂತು ಮಹಾದೇವನು ಅಷ್ಟಮೂರ್ತಿಗಳಿಂದೆ ಸಚರಾಚರವಿಶ್ವಮುಂ ವ್ಯಾಪಿಸಿಕೊಂಡಿರ್ಪುದಂ, ಅವಱಿಂದಲೆ ಜೀವಿಸುತಿರ್ಪುದಂ, ಅಂತಪ್ಪ ಮಹಾಲಿಂಗದ ಚಿಹ್ನಮೇ ಸಚರಾಚರವಿಶ್ವಮನಾಂತಿರ್ಪುದಂ, ಶ್ರುತ ದೃಷ್ಟ ಅನುಮಾನಂಗಳಿಂದೆ ಕಾಣುತ್ತಲುಂ, ಮತ್ತಂ ಪ್ರತ್ಯಕ್ಷಪ್ರಮಾಣಮಾಗಿ ಬ್ರಹ್ಮವಿಷ್ಣುಗಳು ಈಶ್ವರನ ಭಕ್ತರೆಂಬುದರ್ಕೆ ಬ್ರಹ್ಮೇಶ್ವರ ರಾಮೇಶ್ವರರೆಂಬ ಲಿಂಗಂಗಳೆಗಣಿತಮಾಗಿ ಸೇತುಮಧ್ಯ ನಂದಿಕ್ಷೇತ್ರಂಗಳೊಮೊದಲಾದ ಸ್ಥಾನಂಗಳಲ್ಲಿ ಕಾಣುತ್ತಲುಂ, ಮತ್ತಂ ಆವಾವ ಕಾಲದಲ್ಲಿಯುಂ ಯೋನಿಮುಖದಲ್ಲಿ ಸಂಭವಿಸದಿರ್ಪುದೆ ಪರಬ್ರಹ್ಮದ ಲಕ್ಷಣಮಾಗಿ ವಿಷ್ಣುವಿಂಗೆ ಅನಂತಯೋನಿಸಂಭವತ್ವಮುಂ ಭಾರತ ಭಾಗವತ ರಾಮಾ

ಯಣಂಗಳಲ್ಲಿಯೇ ಪೇೞಿತಾಗ್ಗಿ, "ಜಾತಸ್ಯಮರಣಂ ಧ್ರುವಂ" ಎಂದು ಯೋನಿಸಂಭವನಾದಾತಂಗೆ ಮರಣಂ ಮೊದಲೇ ನಿಶ್ಚೈಸಲ್ಪಟ್ಟತಾಗ್ಗಿ, "ಸರ್ವೇ ಸ್ವಾಂಶಭವಾಃ ಪ್ರೋಕ್ತಾಃ ಕೃಷ್ಣಸ್ತು ಭಗವಾನ್ ಸ್ವಯಂ" ಅಂತಪ್ಪ ಕೃಷ್ಣಂಗೆ ಹುಲುಬೇಡನಿಂ ಮರಣಂ ಭಾರತದಲ್ಲಿಯೇ ಪೇೞಿತಾಗ್ಗಿ, ಅಷ್ಟಾದಶಪುರಾಣಂಗಳಲ್ಲಿಯುಂ ಭಾರತರಾಮಾಯಣಾದಿಗಳಲ್ಲಿಯುಂ ಪರಮೇಶ್ವರಂಗೆ ಯೋನಿಜತ್ವಮಂ ಪೇೞ್ದುದಿಲ್ಲಾಗ್ಗಿ,

"ಅಜಾತ ಇತ್ಯೇವ ಕಶ್ಚಿದ್ಭೀರುಃ ಪ್ರಪದ್ಯೇ ರುದ್ರ ಯತ್ತೇ ದಕ್ಷಿಣಂ ಮುಖಂ ತೇನ ಮಾಂ ಪಾಹಿ ನಿತ್ಯಂ" (ಅಜಾತ ಇತ್ಯೇವ—ಜನನವಿಲ್ಲದಹನು ಎಂದೆಯೆ, ಕಶ್ಚಿತ್—ಆವನಾನೊರ್ವ, ಭೀರುಃ—ಭವಬಾಧೆಯಿಂದೆ ಭಯಪಟ್ಟವನು, ಪ್ರಪದ್ಯೇ—ಮಱಹೊಕ್ಕನು, ಹೇರುದ್ರ—ಎಲೈ ರುದ್ರನೆ, ಯತ್—ಆವುದಾನೊಂದು, ತೇ—ನಿನ್ನ, ದಕ್ಷಿಣಂಮುಖಂ—ದಕ್ಷಿಣಸಂಬಂಧವಾದ ಅಘೋರಮುಖವುಂಟು, ತೇನ—ಆ ಮುಖದಿಂದೆ, ಮಾಂ—ಎನ್ನನ್ನು, ನಿತ್ಯಂ—ಆವಾಗಲೂ, ಪಾಹಿ—ರಕ್ಷಿಸು.) "ಈಶಾನಶ್ಚೇತಿ ತತ್ಪೂರ್ವ ಪುರುಷಶ್ಚೇತಿ ಸುವ್ರತಾಃ । ಅಘೋರಶ್ಚೇತಿವಿಪ್ರೇಂದ್ರಾಃ ವಾಮದೇವ ಇತಿ ದ್ವಿಜಾಃ । ಸದ್ಯೋಜಾತ ಇತಿ ಪ್ರಾಜ್ಞಾಃ ನ ಸ್ವರೂಪೇಣ ಭೇದತಃ" ಇಂತೆಂದು ಈಶ್ವರನ ಐದು ಮುಖಂಗಳನ್ನು ಪೇೞಿ "ಸದಾಶಿವೇಶ್ವರೌ ರುದ್ರೋ ವಿಷ್ಣುರ್ಬ್ರಹ್ಮಾ ಚ ಸುವ್ರತಾಃ । ತಾಶ್ಚೇಶಾನಾದಯಃ ಪ್ರೋಕ್ತಾಃ ಕ್ರಮೇಣೈವ ಮುನೀಶ್ವರಾಃ" (ಸದಾಶಿವ, ಈಶ್ವರ, ರುದ್ರ, ವಿಷ್ಣು, ಬ್ರಹ್ಮ, ಎಂಬ ತಾಶ್ಚ—ಆಐದು ಮಂದಿ ದೇವತೆಗಳು, ಈಶಾನಾದಯಃ—ಈಶಾನ, ಅಘೋರ, ತತ್ಪುರುಷ, ವಾಮದೇವ, ಸದ್ಯೋಜಾತ ಮುಖಂಗಳೆಂದು, ಪ್ರೋಕ್ತಾಃ—ಹೇಳಲ್ಪಟ್ಟರು.) ಈಶ್ವರ ಸದಾಶಿವರಿಬ್ಬರು ಅಘೋರಮುಖಕ್ಕಧಿಪತಿಯಾದ ರುದ್ರನಲ್ಲಿಯೇ ಅಂತರ್ಗತರಾದ ಕಾರಣ, ವಿಷ್ಣುಬ್ರಹ್ಮರೂಪವಾದ ವಾಮದೇವ ಸದ್ಯೋಜಾತ ಮುಖಂಗಳಂ ಬಿಟ್ಟು ರುದ್ರರೂಪವಾದ ದಕ್ಷಿಣವಾದ ಅಘೋರಮುಖವೇ ಭವಬಾಧೆಯಿಂದೆ ನಮ್ಮನ್ನು ಪರಿಹರಿಸಿ ರಕ್ಷಿಸೆಂದು ವೇದಪುರುಷನಿಂ ಬೇಡಿಕೊಳಲ್ಪಟ್ಟತು. ಅದುಕಾರಣದಿಂ ವಿಷ್ಣುಬ್ರಹ್ಮರು ಜನನಮರಣಂಗಳಿಗೊಳಗಾದವರೆಂದು ನಿಶ್ಚಯಿಸಲ್ಪಟ್ಟತು.

ಮತ್ತಮದಲ್ಲದೆ ಲಿಂಗಮೂರ್ತಿಯಲ್ಲಿಯೇ ಸಚರಾಚರಂ ಪುಟ್ಟು ದುದರ್ಕೆ ಕುಱುಹೇನೆಂದೊಡೆ— ಸರ್ವಜನರುಂ ಪದ್ಮಾಸನಸ್ಥಿತರಾಗಿ ರ್ದೆಡೆಯೊಳ್ ಲಿಂಗರೂಪಿನಿಂದಲ್ತೆ ತೋಱಲ್ಪಡುತ್ತಿಹರು; ಧಾನ್ಯಾದಿ ಗಳೆಲ್ಲಮುಂ ಸೂಕ್ಷ್ಮರೂಪಿನಿಂ ಲಿಂಗರೂಪಂ ತಾಳ್ದಿಹವು; ಸಮಸ್ತ ತೃಣಲತಾವೃಕ್ಷಾದಿಗಳಿಂದೊಗೆದ ಬೀಜಂಗಳೆಲ್ಲಮುಂ ಲಿಂಗರೂಪಾಂತಿ ಹವು; ಪಶುಪಕ್ಷಿ ಮೊದಲಾದ ಸಮಸ್ತ ಜೀವರಾಶಿಗಳುಂ ಉರಃಪ್ರ ದೇಶ ಮಸ್ತಕಪ್ರದೇಶಂಗಳಲ್ಲಿ ಗ್ರಂಥಿರೂಪಿನಿಂ ಲಿಂಗಮೂರ್ತಿರೂಪಮಂ ತಾಳ್ದಿಹವು; ಇಂತು ಸಚರಾಚರಮೆಲ್ಲಮುಂ ಲಿಂಗಮಯಮಾಗಿ ಲಿಂಗಾಂ ಕಿತಮಾಗಿರ್ಪುದನಱಿಯದೆ ತಂತಮ್ಮ ಮನಸ್ಸಿನ ಅಜ್ಞಾನವಶದಿಂದೆ ಅಂತಪ್ಪ ಮಹಾಲಿಂಗಮೂರ್ತಿಯಂ ಮಱೆದು ಅನ್ಯತಮಂ ನಿಶ್ಚಯಿ ಸಲು, ಆ ಲಿಂಗಮೂರ್ತಿ ಬಯಲಾಯಿತ್ತು; ತಾಂ ಭವಕ್ಕೆ ಗುಱಿಯಾ ದನು. ಇಂತು ಜಲಚಂದ್ರನೋಪಾದಿಯಲ್ಲಿ ಸಚರಾಚರದಲ್ಲಿಯುಂ ತನ್ನ ಪ್ರತಿಚ್ಛಾಯೆಯುಂಟಾಗಿಯುಂ, ಮೂತ್ರಾದಿಗಳಲ್ಲಿ ಚಂದ್ರನು ಪ್ರತಿಬಿಂ ಬಿಸಿದೊಡೆ ಚಂದ್ರಂಗೆ ಅಮಂಗಲತ್ವಂ ಪೊರ್ದಲಱಿಯದುದಾಗಿ ಜ್ಞಾ ನಿಅಜ್ಞಾನಿಗಳಲ್ಲಿ ಮಹಾದೇವಂ ತೋರ್ದೊಡಂ ಜ್ಞಾನಿಗೆ ಮೋಕ್ಷಕಾ ರಣಮಾಯಿತ್ತು, ಅಜ್ಞಾನಿಗೆ ನರಕಕಾರಣಮಾಯಿತ್ತು; ತಾಂ ತನ್ನಂ ತೆ ಮಹಾಲಿಂಗಂ ಜೀಱಾಯಿತ್ತು.

ಇಂತು ಶ್ರುತ, ದೃಷ್ಟ, ಅನುಮಾನ, ಪ್ರತ್ಯಕ್ಷಪ್ರಮಾಣಂಗಳಿಂ ಮಹಾದೇವನೇ ಕಾರಣಕರ್ತನಾಗಿ ತೋಱುತ್ತಿರಲು, ಅಜ್ಞಾನದಿಂ ಜೈನ ಚಾರ್ವಾಕ ಮಾಯಾವಾದಿ ವೈಷ್ಣವರೆಲ್ಲರುಂ ನರಕಭಾಜನ ರಾಗಿ ಕೆಟ್ಟುಪೋಪರೆಂಬುದೀ ಸೂತ್ರದ ಬಹುಶಬ್ದನಿರ್ವಚನಾರ್ಥಂ.

ಮಹಾದೇವಂ ಸರ್ವಜೀವದಯಾಪರನಾದ ಕಾರಣದಿಂ ಆಆ ಮತಾಂ ತರದವರೆಲ್ಲರುಂ ಭವಾಂತರಂಗಳಲ್ಲಿ ಸುಖದುಃಖಂಗಳನನುಭವಿಸುತ್ತುಂ ಜನನಮರಣಂಗಳಿಗೊಳಗಾಗಿ ಮೋಕ್ಷಕಾರಣರಲ್ಲರೆಂಬುದರ್ಥ. ॥೨೬॥

ಪದ ॥ ಜೀವನೆ ಸಕಲಮಾಯಾಪ್ರಪಂಚಾತ್ಮನು ।
ಜೀವನೆ ಸಕಲಬ್ರಹ್ಮಾಂಡಸ್ವರೂಪನು ।
ಜೀವನೆ ಸಚರಾಚರರೂಪನೆನಿಪನು ।

ಜೀವನೆ ಸ್ತ್ರೀಪುನ್ನಪುಂಸಕರೂಪನು ।
ಜೀವನೆ ವಿಷ್ಣುವೆನಿಪನು ಸರ್ವವನು ತಾ ।
ನಾವರಿಸುತೆ ವಿಶ್ವರೂಪವೆತ್ತಿಹನು ನಿ ।
ರಾವಲಂಬದೆ ತನ್ನೊಳಿರ್ದು ಚೇಷ್ಟಿಸುತಿಪ ।
ಭಾವಜಾಂತಕನಾದ ಜ್ಯೋತಿಯೆ ಪತಿಯೆಂದು ।
ಭಾವಿಸು ಸುಖದುಃಖಂಗಳನಾ ಮಹಾ ।
ದೇವಂಗೆ ಕೊಟ್ಟುವೆನ್ನಿಂದನ್ಯವಿಗಿಲೆಂಬ ।
ಭಾವದೊರೆದು ತನ್ನ ನಿಜವ ತಾನಱಿದು ನಿ ।
ರಾವಲಂಬನ ಚಿಚ್ಛಕ್ತಿಯೆ ತಾನೆಂದು ।
ಕೇವಲ ಸತ್ವರಜಸ್ತಮೋಗುಣಗಳಿಂ ।
ಬೀವಿನೋದಂಗಳೆನ್ನಲ್ಲಿಯೆ ಜನಿಸುತೆ ।
ತಾವು ತಮ್ಮಂತೆ ಲಯುಮನೆಯ್ದುವುವೀ ।
ಜೀವನು ನಿತ್ಯನೆಂದಱಿದು ಸುಕೃತ ದುಷ್ಕೃ ।
ತಾವಶೇಷಂಗಳಾ ಗುಣವಾಳಿ ಲಯುಮಾಂತು ।
ವೀವಿಚಾರವನಱಿಯುತೆ ಮುನ್ನ ಬ್ರಹ್ಮವೆ ।
ಸಾವಧಾನದೆ ಲೀಲೆಗೋಸುಗಂ ರೂಪಾಂತೆ ।
ಸಾವುಹುಟ್ಟುಗಳೆನಗಿಲ್ಲ ಲೀಲಾಂತ್ಯದೊ ।
ಳಾ ವಿರೂಪಬ್ರಹ್ಮವಾನಾದೆನೆಂದು ಸ ।
ದಾ ವೀರಶೈವವ್ರತದೊಳನುವರ್ತಿಸಿ ।
ಜೀವೇಶ್ವರರಿಗಭೇದವಮಂ ತಿಳಿದು ತಾಂ ।
ಸೇವಾರ್ಥವಾಗಿ ಪೂಜಿಪುದು ಸದ್ಯೋಮುಕ್ತಿ ।
ಯಾವೇವ ಏಕಮೇವಾದ್ವಿತೀಯಂ ಬ್ರಹ್ಮ ।
ಏವಂ ಸರ್ವಂ ಖಲ್ವಿದಂ ಬ್ರಹ್ಮ ಎನೆ ಗಿರಿ ।
ಜಾವರನನು ಬ್ರಹ್ಮಾ ಶಿವೋ ಮೇ ಎಂಬ ಶ್ರುತಿ ।
ಆವಂದದಿಂದೆ ಶಿವನೇ ಬ್ರಹ್ಮಮೆಂದುದ ।
ನೀವಱಿಯದೆ ಫಲವಂ ಭಜಿಸುತೆ ಮುಕ್ತಿ ।
ಭಾವೆಗೆ ದೂರವಾದಿರಿ ನಿಂದಿಪುದಱಿಂ ।
ದಾವೈತರಣಿಗೆ ನಿಲಯರಾದಿರಿ ಏಕ ।
ಏವ ರುದ್ರೋ ನ ದ್ವಿತೀಯಾಯ ಎನೆ ಶ್ರುತಿ ।
ಯಾವೃಷಭಾಂಕನೆ ದೈವವೆಂಬುದು ಸಿದ್ಧಂ ।
ಕೋವಿದರಱಿಯಲು ಸಾಕು ಇದು ನಿಂದ ।

ಕಾವಳಿಗರರೆ ಬಾಕು ಬ್ರಹ್ಮಸ್ವಾನು ।
ಭಾವಿಗಳಿಗೆ ತಾ ಬೇಕು ವೈಷ್ಣವ ಪಕು ।
ಜೀವಿಗಳರ್ದೆಯು ವೇಕು ಸದ್ಭಕ್ತರ ।
ಕೈವಲ್ಯಮಾರ್ಗವಿಂತೀಯುವ್ಮೃತವಾಕು ॥೦೩॥

ಜೀವನು ಸಕಲಮಾಯಾಪ್ರಪಂಚದಲ್ಲಿ ಮುಂತಾಗಿ ಅನುವರ್ತಿಸುವನಾದ ಕಾರಣಂ ಸಕಲಮಾಯಾಪ್ರಪಂಚಾತ್ಮನೆನಿಸಿದಂ. ಪಿಂಡಾಂಡದಲ್ಲಿ ಅನೇಕ ಬ್ರಹ್ಮಾಂಡಸಚರಾಚರಂಗಳುಮಂತರ್ಗತವಾಗಿರ್ಪುವಾಗಿ ಜೀವನು ಸಕಲಬ್ರಹ್ಮಾಂಡಸಚರಾಚರರೂಪನೆನಿಸಿದಂ. ಒರ್ವ ಜೀವನೇ ಸ್ತ್ರೀಯಾಗಿ ಪುರುಷನಾಗಿ ನಪುಂಸಕನಾಗಿ ತನ್ನ ಸುಕೃತಾನುಸಾರವಾಗಿ ಜನಿಸುವಕಾರಣದಿಂ ಜೀವನು ಸ್ತ್ರೀಪುನ್ನಪುಂಸಕರೂಪನೆನಿಸಿದಂ. ಪ್ರಕೃತಿಯೆ ಜೀವನು, ಪರಮಾತ್ಮನೇ ಪುರುಷನಾದ ಕಾರಣಂ ವಿಷ್ಣುಸಂಬಂಧವೆಲ್ಲಮುಂ ಪ್ರಕೃತಿಯೆನಿಸಿತ್ತಾಗಿ ಜೀವನು ವಿಷ್ಣುವೆ ಅಲ್ಲದೆ ಬೇಱೊರ್ಬನಲ್ಲ. ಮತ್ತಂ ಜನನಮರಣಾದಿಗಳುಂ ವಿಶ್ವವ್ಯಾಪಕತ್ವಮುಂ ವಿಷ್ಣುವಿಂಗೆಯುಂ ಜೀವಂಗೆಯುಂ ಸಮಾನಪ್ರತಿಪತ್ತಿಯಾದಕಾರಣ ಒರ್ಬ ವಿಷ್ಣುವೇ ಅನೇಕರೂಪನಾದನೆಂಬುದರ್ಥಂ. ಜೀವಂಗೆ ವಿಶ್ವವ್ಯಾಪಕತ್ವಮಂ ಆತ್ಮಜ್ಞಾನಿಗಳಱಿವರ್. ಈಯರ್ಥದಲ್ಲಿ ಸೂತಸಂಹಿತೆ ಪೇೞ್ದುದು:– "ಅಥವಾಹಂ ಹರಿಸ್ಸಾಕ್ಷಾತ್ಸರ್ವಜ್ಞಃ ಪುರುಷೋತ್ತಮಃ । ಸಹಸ್ರ ಶೀರ್ಷಃ ಪುರುಷ ಸ್ಸಹಸ್ರಾಕ್ಷಸ್ಸಹಸ್ರಪಾತ್ । ವಿಶ್ವಂ ನಾರಾಯಣಂ ದೇವಮಕ್ಷರಃ ಪರಮಃ ಪ್ರಭುಃ । ಇತಿ ಧ್ಯಾತ್ವಾ ಪುನಸ್ಸ್ವಸ್ಯ ಹೃದಯಾಂಭೋಜಮಧ್ಯಮೇ । ಪ್ರಾಣಾಯಾಮೇ ವಿಕಸಿತೇ ಪರಮೇಶ್ವರಮಂದಿರೇ । ಅಷ್ಟೈಶ್ವರ್ಯದಳೋಪೇತೇ ವಿದ್ಯಾಕೇಸರಸಂಯುತೇ । ವೈಶ್ವಾನರಂ ಜಗದ್ಯೋನಿಂ ಶಿಖಾತನ್ವಿನಮೀಶ್ವರಃ । ತಾಪಯಂತಂ ಸ್ವಕಂ ದೇಹಮಾಪಾದತಲಮಸ್ತಕಂ । ನಿವಾತದೀಪವತ್ತಸ್ಮಿನ್ ದೀಪಿತಂ ಹವ್ಯವಾಹನಂ । ನೀವಾರಶೂಕವದ್ರೂಪಂ ಪೀತಾಭಾಸಂ ವಿಚಿಂತಯೇತ್ । ತಸ್ಯ ವಹ್ನೇಶ್ಶಿಖಾಯಾಶ್ಚ ಮಧ್ಯೇ ಪರಮಕಾರಣಂ । ಪರಮಾತ್ಮಾನಮಾನಂದಂ ಪರಮಾಕಾಶಮೀಶ್ವರಂ । ಋತಂ ಸತ್ಯಂ ಪರಂ ಬ್ರಹ್ಮ ಸಾಂಬಂ ಸಂಸಾರಭೇಷಜಂ । ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಂ ಮಹೇ

ಶ್ವರಂ । ನೀಲಗ್ರೀವಂ ಸ್ವಮಾತ್ಮಾನಂ ಪಶ್ಯಂತಂ ಪಾಪನಾಶನಂ । ಬ್ರಹ್ಮ ವಿಷ್ಣುಮಹೇಶಾನ್ಯೈ ರ್ಧ್ಯೇಯಂ ಧ್ಯೇಯವಿವರ್ಜಿತಂ ।ಸೋಹಮಿತ್ಯಾದರೇ ಣೈವ ಧ್ಯಾಯೇದ್ಯೋಗೀಶ್ವರೇಶ್ವರಃ'' (ಟೀ॥ ಅಂತರ್ಯಾಮಿಯಾದ ಮಹಾ ದೇವನಂ ಧ್ಯಾನಿ ಸುವಲ್ಲಿ, ಅಥವಾ—ಹಾಗಿಲ್ಲವಾದೊಡೆ, ಅಹಂ—ನಾನು, ಸಹ ಸ್ರಾಕ್ಷಃ—ಸಾಸಿರನೇತ್ರಂಗಳನುಳ್ಳಂಥ, ಸಹಸ್ರಪಾತ್—ಸಾಸಿರಪಾದಂಗಳ ನುಳ್ಳಂಥ, ಸಹಸ್ರಶೀರ್ಷಃ—ಸಹಸ್ರಶಿರಸ್ಸುಗಳನುಳ್ಳಂಥ, ಪುರುಷಃ—ಈ ಶ್ವರನಾದಂಥ, ಸರ್ವಜ್ಞಃ—ಸರ್ವಜ್ಞನಾದಂಥ, ಪುರುಷೋತ್ತಮಃ—ಪುರು ಷಶ್ರೇಷ್ಠನಾದಂಥ, ವಿಶ್ವಃ—ವಿಶ್ವರೂಪನಾದಂಥ, ನಾರಾಯಣಃ—ಉದಕ ಮಧ್ಯದಲ್ಲಿ ಶಯನವ ಮಾಡುವಂಥ, ದೇವಃ—ಪ್ರಕಾಶಮಾನನಾದಂಥ, ಅಕ್ಷ ರಃ—ನಾಶವಿಲ್ಲದಂಥ, ದೇಹೋಪಾಧಿಯಿಂ ಜನನಮರಣಂಗಳುಂಟಾಗಿಯುಂ ಜೀವಂಗೆ ನಾಶವಿಲ್ಲವೆಂಬುದರ್ಥ. ಪರಮಃ—ಉತ್ಕೃಷ್ಟನಾದಂಥ, ಪ್ರ ಭುಃ—ಸ್ವತಂತ್ರಶೀಲನಾದಂಥ, ತನ್ನಂ ತಾನರಿವನೇ ಸ್ವತಂತ್ರಶೀಲನೆಂಬುದ ರ್ಥ. ಹರಿಃ—ವಿಷ್ಣುವು, ಇಂತಪ್ಪ ವಿಷ್ಣುವೇ ಶಿವನೆಂಬುದಥ. ಇತಿ— ಹೀಗೆಂದು, ಧ್ಯಾತ್ವಾ—ತನ್ನಂ ತಾಂ ಧ್ಯಾನಿಸಿಕೊಂಡು, ಪುನಃ—ಮರಳಿ, ಸ್ವ ಸ್ಯ—ತನ್ನ, ಪ್ರಾಣಾಯಾಮೇ—ಪ್ರಾಣಾಯಾಮದಿಂದೆ, ವಿಕಸಿತೇ—ವಿಕಸ ನಮನೈದಿದಂಥ, ಪರಮೇಶ್ವರ—ಪರಮೇಶ್ವರಂಗೆ, ಮಂದಿರೇ—ಮನೆಯಾ ಗಿರ್ದಂಥ, ಅಷ್ಟೈಶ್ವರ್ಯದಳೋಪೇತೇ—ಅಣಿಮಾದಿಸಿದ್ಧಿಗಳೆಂಬ ಎಂಟು ದಳಂಗಳಿಂದೆ ಕೂಡಿದ, ವಿದ್ಯಾ—ಜ್ಞಾನವೆಂಬ, ಕೇಸರ—ಕಿಂಜಲ್ಕಂಗ ಳಿಂದೆ, ಸಂಯುತೇ—ಕೂಡಿದಂಥ, ಹೃದಯ—ಹೃದಯವೆಂಬ, ಅಂಭೋ ಜ—ತಾವರೆಯ, ಮಧ್ಯಮೇ—ಮಧ್ಯದಲ್ಲಿ, ಜಗದ್ಯೋನಿಂ—ತ್ರಿಭುವನಕ್ಕೆ ಕಾರಣವಾದಂಥ, ಶಿಖಾ—ಶಿಖೆಗಳಿಂದೆ, ತನ್ವಿನಂ—ಸಣ್ಣನಾದಂಥ, ಈಶ್ವ ರಂ—ಐಶ್ವರ್ಯಕ್ಕೆ ಕಾರಣನಾದ, ಸ್ವಕಂ ದೇಹಂ—ತನ್ನ ದೇಹವನ್ನು, ಆಪಾ ದತಲಮಸ್ತಕಂ—ಪಾದಗಳೇ ಮೊದಲಾಗಿ ಮಸ್ತಕಪರ್ಯಂತರವ್ವ, ತಾಪ ಯಂತಂ—ಬಿಸಿಮಾಡುವಂಥ, ನಿವಾತದೀಪವತ್—ಗಾಳಿಸಂಚಾರವಿಲ್ಲದಕಡೆ ಯಿರುವ ದೀಪದಂತೆ, ದೀಪಿತಂ—ಪ್ರಕಾಶಿಸುತ್ತಿರ್ದಂಥ, ಹವ್ಯವಾಹನಂ— ಹವ್ಯವಾಹನನೆಂಬ ಹೆಸರುಂಟಾದ, "ನೀಲತೋಯದಮಧ್ಯಸ್ಥ ವಿದ್ಯು ಲ್ಲೇಖೇವ ಭಾಸ್ವರಂ'' ನೀಲಮೇಘದ ಮಧ್ಯದಲ್ಲಿರ್ಪ ಮಿಂಚಿನ ರೇಖೆ

ಯಂತೆ ಪ್ರಕಾಶಿಸುತ್ತಿರ್ದಂಥ, ನೀವಾರಶೂಕವತ್–ಜವೆಗೋಧಿಯ ಮುಳ್ಳಿನಂತೆ, ರೂಪಂ–ಅತ್ಯಂತಸಣ್ಣವಾದರೂಪುಳ್ಳ, ಪೀತ–ಪಿಂಗಳವರ್ಣದಿಂದೆ, ಆಭಾಸಂ–ದೀಪ್ತಿವೆತ್ತಿರ್ದ, ವೈಶ್ವಾನರಂ–ಅಗ್ನಿಯನ್ನು, ವಿಚಿಂತಯೇತ್–ಧ್ಯಾನಿಸುವುದು, ತಸ್ಯ ವಹ್ನೇಃ–ಅಂತಪ್ಪ ವಹ್ನಿಯ, ಶಿಖಾಯಾಶ್ಚ–ಜ್ವಾಲೆಯ, ಮಧ್ಯೇ–ಮಧ್ಯದಲ್ಲಿ, ಪರಮಕಾರಣಂ– "ಕಾರಣಂ ತು ಧ್ಯೇಯಃ" ಎಂದು ಅಥರ್ವಶಿಖಾವಾಕ್ಯವುಂಟಾಗಿ ಬ್ರಹ್ಮವಿಷ್ಣುರುದ್ರರ್ಗೆ ತಾನೇ ಕಾರಣಕರ್ತೃವಾದ ಶಂಭುಶಬ್ದವಾಚ್ಯನಾದ, ಪರಮಾತ್ಮಾನಂ– "ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ" ಎಂದು ಉತ್ತರತಾಪನೀಯಮಾಂಡೂಕ್ಯೋಪನಿಷತ್ಪ್ರಸಿದ್ಧವಾಗಿ ಪರಮಾತ್ಮನೆನಿಸಿಕೊಳ್ಳಲ್ಪಟ್ಟ, ಆನಂದಂ–ಸಚ್ಚಿದಾನಂದಭರಿತನಾದಂಥ, ಪರಮಾಕಾಶಂ–ಚಿದಾಕಾಶರೂಪನಾದಂಥ, ಈಶ್ವರಂ–ಲಕ್ಷ್ಮೀಶ್ವರ ವಾಣೀಶ್ವರ ತ್ರಿದಿವೇಶ್ವರ ಎಂಬಂತೆ ಸೋಪಪದಪೂರ್ವಕಮಲ್ಲದೆ ಅಸಾಧಾರಣೇಶ್ವರಶಬ್ದವಾಚ್ಯನಾಗಿ ಸರ್ವರಿಗೂ ಒಡೆಯನಾದಂಥ, ಋತಂ–ನಿಶ್ಚಯವಾಗಿ, ಸತ್ಯಂ–ಸತ್ಯವಾಗಿ, ಪರಂಬ್ರಹ್ಮ–ಪರಬ್ರಹ್ಮವಾದ, ಸಾಂಬಂ– "ಅಂಬಯಾ ಸಹ ವರ್ತತೆ ಇತಿ ಸಾಂಬಃ" ಎಂಬ ನಿರ್ವಚನಪ್ರಕಾರದಿಂದೆ ಪಾರ್ವತೀದೇವಿಯೊಡನೆ ಕೂಡಿದಂಥ, ಸಂಸಾರಭೇಷಜಂ–ಸಂಸಾರವೆಂಬರೋಗಕ್ಕೆ ವೈದ್ಯನಾದಂಥ, ಊರ್ಧ್ವರೇತಂ–ಊರ್ಧ್ವರೇತಸ್ಸನುಳ್ಳ, ವಿರೂಪಾಕ್ಷಂ–ಮೂರುಲೋಚನಂಗಳನುಳ್ಳ, ವಿಶ್ವರೂಪಂ–ಜಗದ್ರೂಪನಾದಂಥ, ಮಹೇಶ್ವರಂ–ದೊಡ್ಡಸ್ವಾಮಿಯಾದಂಥ, ನೀಲಗ್ರೀವಂ–ನೀಲಕಂಧರನಾದಂಥ, ಸ್ವಮಾತ್ಮಾನಂ–ತನ್ನ ನಿಜವ ತಾನೇ, ಪಶ್ಯಂತಂ–ನೋಡುತಿರ್ದಂಥ, ಪಾಪನಾಶನಂ–ಆತ್ಮಹತ್ಯೆ ಸ್ತ್ರೀ ಹತ್ಯೆ ಮಾತೃಹತ್ಯೆ ಬ್ರಹ್ಮಹತ್ಯೆಯೇ ಮೊದಲಾದ ಮಹಾಪಾಪಂಗಳನ್ನು ಸ್ಮರಣಮಾತ್ರದಲ್ಲಿಯೇ ನಾಶಂಗೆಯ್ವ, ಬ್ರಹ್ಮವಿಷ್ಣುಮಹೇಶಾನ್ಯೈಃ–ಬ್ರಹ್ಮವಿಷ್ಣುರುದ್ರರಿಂದೆ, ಧ್ಯೇಯಂ–ಧ್ಯಾನವಂ ಮಾಡಿಸಿಕೊಳ್ಳಲ್ಪಟ್ಟ, ಧ್ಯೇಯಮವಿವರ್ಜಿತಂ–ತನ್ನಿಂದೆ ಧ್ಯಾನಕ್ಕೆಯೋಗ್ಯವಹ ವಸ್ತುವಿಲ್ಲಂಥ ದೇವನನು, ಧ್ಯಾತ್ವಾ–ಧ್ಯಾನಿಸಿ, ಸಃ–ಅಂತಪ್ಪ ಮಹಾದೇವನೇ, ಅಹಂ–ನಾನು, ಇತಿ–ಹೀಗೆಂದು, ಆದರೇಣ–ಸಾವಧಾನದಿಂದೆ, ಯೋಗೀಶ್ವರೇಶ್ವರಃ–ಯೋಗಿಶ್ರೇಷ್ಠನಾದಾತನು, ಧ್ಯಾಯೇತ್–

ಧ್ಯಾನವಂಮಾಡುವುದು.) ಜೀವನೇ ಶಕ್ತಿಸಂಬಂಧಿ; ಆ ಶಕ್ತಿಯೇ ವಿಷ್ಣು ವಾದ ಕಾರಣ, ಪರಮಾತ್ಮನು ಧ್ಯಾನಿಸುವಲ್ಲಿ ತಾನೇ ವಿಷ್ಣುವೆಂದು ಭಾವಿಸಿ, ತನ್ನ ಹೃದಯಕಮಲವನ್ನು ಅಷ್ಟದಳಕಮಲವನ್ನಾಗಿ ತಿಳಿದು, ಅಂತಪ್ಪ ಹೃದಯಕಮಲಮಧ್ಯದಲ್ಲಿ ಒಂದಾನೊಂದು ಅಣುರೂಪವಾದಚೈತನ್ಯರೂಪವಾದ ಅಗ್ನಿಯನ್ನು ಧ್ಯಾನಿಸಿ, ಆಅಗ್ನಿಯ ಮಧ್ಯದಲ್ಲಿ ಊರ್ಧ್ವರೇತನಾದ, ವಿರೂಪಾಕ್ಷನಾದ, ಉಮಾಸಹಾಯನಾದ ಮಹಾದೇವನಂ ಧ್ಯಾನಿಸಿ, ಅಂತಪ್ಪಮಹಾದೇವನೇ ತಾನೆಂಬ ಭಾವದಿಂದಿರಲು ಜೀವೇಶ್ವರರ್ಗೆ ಅಭೇದವಾಯಿತ್ತು. "ಶರಣಸತಿ ಲಿಂಗಪತಿ'' ಯೆಂಬ ಭಾವದಿಂ ಹರಿಹರರ್ಗೆ ಅಭೇದವಾಯಿತ್ತು. ಅದುಕಾರಣದಿಂ ಜೀವನೇವಿಷ್ಣುವೆಂಬುದರ್ಥ.

ಹಾಂಗೆಯೇ ಮಹೋಪನಿಷತ್ತಿನಲ್ಲಿ— "ಸಹಸ್ರಶೀರ್ಷಂ ಪುರುಷಂ ವಿಶ್ವಾಕ್ಷಂ ವಿಶ್ವಸಂಭವಂ । ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪ್ರಭುಂ" ಎಂದು ನಾರಾಯಣನಂ ಪರಬ್ರಹ್ಮಭಾವದಿಂ ಸ್ತೋತ್ರಮಂ ಮಾಡಿ, ಮರಳಿ "ಪದ್ಮಕೋಶಪ್ರತೀಕಾಶಂ ಹೃದಯಂ ಚಾಪ್ಯಧೋಮುಖಂ" ಎಂದು ನಾರಾಯಣಂಗೆ ಹೃದಯಕಮಲಮಂ ಪೇೞ್ದು, "ತಸ್ಯ ಮಧ್ಯೇ ಮಹಾನಗ್ನಿರ್ವಿಶ್ವಾಕ್ಷಿ ರ್ವಿಶ್ವತೋಮುಖಃ" ಎಂದು ಅಂತಪ್ಪ ಹೃದಯಕಮಲಮಧ್ಯದಲ್ಲಿ ಒಂದಾನೊಂದು ವಿಶ್ವತೋಮುಖವಾದ ವಿಶ್ವಾಕ್ಷಿಯಾದ ಅಗ್ನಿಯಂ ಪೇೞ್ದು, "ತಸ್ಯಾ ಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ" ಎಂದು ಅಂತಪ್ಪ ಅಗ್ನಿಯ ಮಧ್ಯದಲ್ಲಿ ಪರಮಾತ್ಮನಾದ ರುದ್ರನಿರ್ಪನೆಂದು ಪೇೞುತ್ತಾಗಿ, ವಿಷ್ಣುವೇ ಶರಣನಾದನು; ಮಹಾದೇವನೇ ಪತಿಯಾದನು. "ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ" (ತದ್ವಿಷ್ಣೋಃ—ಅಂತಪ್ಪ ವಿಷ್ಣುವಿನ, ಪರಮಂ ಪದಂ—ಈಶ್ವರನತ್ತಣಿಂ ಪಡೆಯಲ್ಪಟ್ಟಂಥ ಮೋಕ್ಷಪದವಿಯನ್ನು ಸೂರಯಃ—ಯೋಗಿಗಳು, ಸದಾ—ಎಲ್ಲಕಾಲದಲ್ಲಿಯೂ, ಪಶ್ಯಂತಿ—ನೋಡುತ್ತಿಹರು.) ಇಂತೆಂದು ಮಹೋಪನಿಷನ್ನಾರಾಯಣೋಪನಿಷತ್ತು ಮುಂತಾದುವಱಲ್ಲಿ ಪೇೞಲ್ಪಟ್ಟತ್ತಾಗಿ ವಿಷ್ಣುವೇ ಪರಮಭಕ್ತನೆಂದಱಿವುದು.

ಮತ್ತಂ "ತವಶ್ರಿಯೇ ಮರುತೊ ಮರ್ಜಯಂತೊ ರುದ್ರ ಯತ್ತೇ ಜನಿಮ ಚಾರು ಚಿತ್ರಂ ಪದಂ ಯದ್ವಿಷ್ಣೋಃ ಪರಮಂ ನಿಧಾಯಿ''

(ಹೆ ರುದ್ರ—ಎಲೈ ರುದ್ರನೆ, ಚಾರು—ಮನೋಹರವಾದ, ಚಿತ್ರಂ—ಆಶ್ಚರ್ಯಕರವಾದ, ತೆ—ನಿನ್ನ, ಜನಿಮಂ—ಲಿಂಗವನ್ನು, ಮರುತಃ—ದೇವತೆಗಳು, ತವ—ನಿನ್ನ, ಶ್ರಿಯೆಃ—ಐಶ್ವರ್ಯಕ್ಕೋಸ್ಕರ, ಮರ್ದಯಂತಃ—ಪೂಜಿಸುತ್ತಿಹರು,ಯತ್—ಆವುದಾನೊಂದು ಲಿಂಗವು, ವಿಷ್ಣೋಃ—ವಿಷ್ಣುವಿಂಗೆ, ಪರಮಂಪದಂ—ಪರಮಪದವಿಯನ್ನು, ನಿಧಾಯಿ—ಕೊಟ್ಟುದು.) ಇಂತೆಂದು ವೇದಪುರುಷಂ ಪೇಳ್ದಿನಾಗಿ ಪರಮಭಕ್ತನಾದ ವಿಷ್ಣುವಿಂಗೆ ಪರಮಪದವಿಯುಶಿವನಿಂದೆ ಕೊಡಲ್ಪಟ್ಟಿತೆಂದು ನಿಶ್ಚಯಿಸುವುದಱಿಂದೆ ಉಪಾಸ್ಯೋಪಾಸಕಭಾವದಿಂ ಜೀವನೇ ವಿಷ್ಣುವಾದನು. ಅದುಕಾರಣದಿಂ ತನ್ನಲ್ಲಿರ್ಪ ಪರಂಜ್ಯೋತಿಯಾದ ಪರಮಾತ್ಮನೇ ಪತಿಯೆಂದು ತನಗೆ ಬರ್ಪ ಸುಖದುಃಖಂಗಳನಾ ಮಹಾದೇವಂಗೆ ಸಮರ್ಪಿಸಿ "ಏಕಮೇವಾದ್ವಿತೀಯಂ ಬ್ರಹ್ಮ" ಎಂದು ಎರಡಿಲ್ಲದ ವಸ್ತುವೆಂದು ಪೇಳಿತಾಗಿ ಅಂತಪ್ಪ ಎರಡಿಲ್ಲದ ಪರಬ್ರಹ್ಮದಲ್ಲಿತನಗೆ ಬರ್ಪ ಸುಖದುಃಖಂಗಳಂ ಸಮರ್ಪಿಸಿದನಾಗಿ, ಆ ಎರಡಿಲ್ಲದ ವಸ್ತು ತಾನೆಯಾದನಾಗಿ ತನ್ನಿಂದನ್ಯವಿಲ್ಲವೆಂಬುದರ್ಥಂ.

ತಾನೇ ತಾನಾದಲ್ಲಿ ಅಖಂಡಿತಪರಬ್ರಹ್ಮವೊಂದೇಆಯಿತಾಗಿ ಜಗದ್ವ್ಯಾಪಾರನಿಮಿತ್ತವಾಗಿ ಉಪಾಸ್ಯೋಪಾಸಕ ಭಾವದಿಂ ಜೀವನೇ ಆ ಮಹಾದೇವಂಗೆ ಇಚ್ಛಾಶಕ್ತಿ ಕ್ರಿಯಾಶಕ್ತಿ ಜ್ಞಾನಶಕ್ತಿಗಳೆಂಬ ಶಕ್ತಿತ್ರಯರೂಪನಾಗಿ, ಜಗದುತ್ಪಾದನ ಸ್ಥಾಪನ ಸಂಹಾರ ತಿರೋಧಾನ ಅನುಗ್ರಹಂಗಳೆಂಬ ಪಂಚಕೃತ್ಯಂಗಳಂ ತನ್ನ ಮಾಯಾವಿಲಾಸಕ್ಕೋಸುಗ ತಾನೆ ನಟಿಸುತ್ತಿರ್ದು, ಸತ್ವರಜಸ್ತಮೋಗುಣಂಗಳಿಂ ಬಂದ ಪಾಪಪುಣ್ಯಪಾಶಂಗಳಿಂ ಕಟ್ಟುವಡೆದು, ತನಗೆಬಂದ ಸುಖದುಃಖಂಗಳಂ ತಾನೆ ಅನುಭವಿಸಿದನಾದೊಡೆ ಆತ್ಮಸಾಕ್ಷಾತ್ಕಾರಂ ಸಿದ್ಧಿಸದಾಗಿ ತನ್ನಲ್ಲಿರ್ದ ಪರಮಾತ್ಮನನಱಿದಲ್ಲಿ ಸೂರ್ಯನಂ ಕಂಡ ಕತ್ತಲೆಯಂತೆ ಬಂಧಂಗಳ್ ಪರಿದು ಪೋಪುವೆಂಬುದಱಿಂ ಜೀವಂಗೆ ಜನನಮರಣಂಗಳಿಲ್ಲವೆಂಬುದನಱಿವು, ಬ್ರಹ್ಮವಿರ್ದಲ್ಲಿ ಜೀವನುಂ ಜೀವನಿರ್ದಲ್ಲಿ ಬ್ರಹ್ಮವಿರ್ದತ್ತೆಂಬ ಉಭಯವಿವೇಕಂಗಳನಱಿಸು, ಜೀವನೇ ಸತಿ ಪರಮನೇ ಪತಿ ಯೆಂಬುದನಱಿದು—ಜೀವಪರಮರುಗಳೆಂಬೆರಡು ಪಕ್ಷಿಗಳು ಸಂಸಾರವೆಂಬ ವೃಕ್ಷಮನೇಱಿ ಪಾಪಪುಣ್ಯಂಗಳೆಂಬ ಫಲಂಗಳಂ ಕಾಣುವಲ್ಲಿ, ಜೀವಪಕ್ಷಿಗೆ ಮನಮೆಳಸಿ

ತ್ತು; ಪರಮಪಕ್ಷಿ ನಿತ್ಯತೃಪ್ತನಾಗಿ ಏತಱ ಗೊಡವೆಯುಮಿಲ್ಲದೆ ತಾನಾಗಿ ಇರ್ದತ್ತು. ಜೀವಪಕ್ಷಿ ನಾನಾಫಲಾದಿಗಳನನುಭವಿಸಿದ ಮದದಿಂ ತನ್ನ ಪ್ರಾಣಕಾಂತನಾದ ಪರಮಪಕ್ಷಿಯಂ ಮಱೆದಲ್ಲಿ ಕರ್ಮಾನುಗುಣವಾದ ಫಲಂಗಳನನುಭವಿಸಿಕೊಂಡು ಸಂಸಾರವೆಂಬ ವೃಕ್ಷದಲ್ಲಿಯೇ ತೊಳಲುತಿರ್ದುದು. ಕಮಠನು ತಾನುಂಡು ತನ್ನ ನೆನಹುಮಾತ್ರದಿಂದಲೇ ಮಱಿಗಳ್ಗೆ ತೃಪ್ತಿಬಡಿಸುವಂತೆ, ಸಂಸಾರವೃಕ್ಷದ ಫಲಂಗಳನನುಭವಿಸಿ ತೃಪ್ತಿವಟ್ಟು ಪರಮಪಕ್ಷಿಯಲ್ಲಿ ಮನಂ ನಲಿದಾಡಲು, ನಿರ್ಲೇಪನಾದೆನೆಂಬ ಭಾವಂ ಬಲಿದು, ನಿತ್ಯನಾದ ಪರಮನಲ್ಲಿ ಅನುವರ್ತಿಸುವ ಜೀವನು ನಿತ್ಯನೆಂಬುದನಱಿದು, ತನಗೆ ಬಂದ ಸುಕೃತದುಷ್ಕೃತಂಗಳೆಲ್ಲಮುಂ ಸತ್ವರಜಸ್ತಮೋಗುಣಂಗಳಲ್ಲಿಯೇ ಬಯಲಪ್ಪುದುವೆಂಬುದನಱಿದು, ಮುನ್ನವೊಂದು ಬ್ರಹ್ಮವೇ ಭಕ್ತಿನಿಮಿತ್ತವಾಗಿ ಜೀವಪರಮರುಗಳೆಂಬಭಾವಂದಳೆದಂ, ಎನಗೆ ಜರಾಮರಣಂಗಳೆಂದುಮಿಲ್ಲವೆಂಬ ನಂಬುಗೆಯಂ ತಾಳ್ದು ಸದಾಕಾಲದಲ್ಲಿಯುಂ "ಸೋಹಂ" "ಸೋಹಂ" ಎಂದು ನಡೆವ ಸ್ವರಭೇದವಂ ತಿಳಿದು, ಅಂತಪ್ಪ ಪರಬ್ರಹ್ಮಮೇ ತಾನೆಂಬುದಂ ನಿರ್ಧರಿಸಿ, ಜೀವೇಶ್ವರರ್ಗೆ ಅಭೇದವಾಗಿ ಅನುವರ್ತಿಸುವ ವೀರಶೈವವ್ರತಮನಾಚರಿಸಿದಲ್ಲದೆ ಮೋಕ್ಷವಿಲ್ಲವೆಂಬುದೇ ನಿಶ್ಚಿತಮಕ್ಕುಂ.

ಮತ್ತಂ "ಸರ್ವಲಿಂಗಗಂ 'ಸ್ಥಾಪಯತೀ'ತಿ ವಾಕ್ಯೇನ ಲಿಂಗಸ್ಥಾಪನಂ ವಿಧಾಯ, ಲಿಂಗಸ್ಥಾಪನಸ್ಯಾಧಿಕರಣಂ ಕಿಮಿತ್ಯಾಕಾಂಕ್ಷಾಯಾಂ 'ಪಾಣಿಮಂತ್ರಂ ಪವಿತ್ರಂ'— ಪಾಣೌ ಮನನಾತ್ತ್ರಾಯತ ಇತಿ ಪಾಣಿಮಂತ್ರಂ, ಪವಿತ್ರಮಿತ್ಯನೇನ 'ಯಜ್ಞೋಪವೀತಂ ಪರಮಂ ಪವಿತ್ರಂ' ಇತಿವತ್ ಸರ್ವದಾಪಿಧಾರ್ಯತ್ವಂ ಪ್ರತೀಯತೇ" ಎಂದು ಸದಾಕಾಲದಲ್ಲಿಯುಂ ಲಿಂಗಧಾರಣಂ ವೇದಪುರುಷನಿಂದೆ ಪೇೞಲ್ಪಟ್ಟತಾಗಿ;

ಮತ್ತಂ "ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಅತಪ್ತತನೂರ್ನತದಾಮೋಶ್ನುತೇ" (ಎಲೈ ಪರಮೇಶ್ವರನೇ ನಿನ್ನ ಲಿಂಗಮೂರ್ತಿಯು ದೀಕ್ಷೆಯಿಲ್ಲದಜ್ಞಾನಮಯವಾದ ಶರೀರಕ್ಕೆ ಎಯ್ದಲಱಿಯದು.) ಮತ್ತಂ "ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಹ್ಮಣಸ್ಪತಿರೀಶ್ವರಃ । ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂಪರ್ಕಾತ್ತನುಶ್ಶುಚಿಃ । ಅತಪ್ತತನುರಜ್ಞೋ

ವೈ ಆಮಸ್ಸಂಸ್ಕಾರವರ್ಜಿತಃ । ದೀಕ್ಷಯಾ ರಹಿತಸ್ಸಾಕ್ಷಾ ನ್ನಾಪ್ನುಯಾ ಲ್ಲಿಂಗಮುತ್ತಮಂ" (ಬ್ರಹ್ಮೇತಿ-ಬ್ರಹ್ಮವೆಂದರೆ, ಲಿಂಗಂ-ಶಿವಲಿಂಗವು, ಆಖ್ಯಾತಃ-ಹೇಟಲ್ಪಟ್ಟತು, ಈಶ್ವರಃ-ಪರಶಿವನು, ಬ್ರಹ್ಮಣಃ-ಲಿಂಗ ಕ್ಕೆ, ಪತಿಃ-ಅಧಿಷ್ಠಾನವಾದವನು, ತತ್-ಆ ಶಿವಲಿಂಗವು, ಪವಿತ್ರಂ- ಪಾವನವಾದುದೆಂದು, ಆಖ್ಯಾತಃ-ಹೇಟಲ್ಪಟ್ಟತು, ತತ್ಸಂಪರ್ಕಾತ್- ಆಶಿವಲಿಂಗದ ಸಂಯೋಗದ ದೆಸೆಯಿಂದೆ, ತನುಃ-ಶರೀರವು, ಶುಚಿಃ-ಪರಿ ಶುದ್ಧವಾದುದು, ಅತಪ್ತತನುಃ-ಜನ್ಮಾಂತರದಲ್ಲಿ ತಪಸ್ಸೆಂಬ ಅಗ್ನಿ ಯಿಂದ ಸುಡಲ್ಪಡದ ದೇಹವುಳ್ಳವನೂ, ಅಜ್ಞಃ-ಮೂಢನಾದವನೂ, ಆಮಃ-ಅಪರಿಪಕ್ವಾಂತಃಕರಣನಾದವನೂ, ಸಂಸ್ಕಾರವರ್ಜಿತಃ-ಶಿವಭ ಕ್ತಿಸಂಸ್ಕಾರವಿಲ್ಲದವನೂ, ದೀಕ್ಷಯಾ-ಶಿವದೀಕ್ಷೆಯಿಂದ, ರಹಿತಃ-ಹೀನ ನಾದವನೂ, ಉತ್ತಮಂ-ಶ್ರೇಷ್ಠವಾದ, ಲಿಂಗಂ-ಶಿವಲಿಂಗವನ್ನು, ಸಾ ಕ್ಷಾತ್-ಪ್ರತ್ಯಕ್ಷವಾಗಿ, ನಾಪ್ನುಯಾತ್-ಹೊಂದಲಾರನು, ಶರೀರದಲ್ಲಿ ಧರಿ ಸಲಾರನೆಂದರ್ಥ.) ಇಂತೆಂಬ ಶ್ರುತಿಪುರಾಣಸಮ್ಮತಿಯುಂಟಾಗಿ;

ಮತ್ತಂ ಯಜುರ್ವೇದದಲ್ಲಿ— "ಯಾ ತೇ ರುದ್ರ ಶಿವಾ ತನೂರ ಘೋರಾ ಪಾಪಕಾಶಿನೀ । ತಯಾ ನಸ್ತನುವಾ ಶಂತಮಯಾ ಗಿರಿಶಂತಾಭಿ ಚಾಕಶೀಹಿ" (ಹೇ ರುದ್ರ-ಎಲೈ ಪರಶಿವನೇ, ಯಾ-ಯಾವ, ತೇ-ನಿ ನ್ನ, ತನುಃ-ಲಿಂಗರೂಪವಾದ ಶರೀರವು, ಅಘೋರಾ-ಶಾಂತಾಕಾರವಾದು ದೋ, ಅಪಾಪ-ಪಾಪರಹಿತರಾದ ಭಕ್ತರಲ್ಲಿ, ಕಾಶಿನೀ-ಪ್ರಕಾಶಿಸುವಂ ಥಾದುದೋ, ಸರ್ವದಾ ಧರಿಸಲ್ಪಡುವುದರಿಂದ ಜಾಗರೂಕವಾಗಿರುವದೆಂ ದು ಭಾವವು, ಶಂತಮಯಾ-ಅತ್ಯಂತ ಸುಖಕರವಾದ, ತಯಾ ತನುವಾ- ಆ ಲಿಂಗರೂಪವಾದ ಶರೀರದಿಂದ, ನಃ-ನಮ್ಮನ್ನು, ಅಭಿಚಾಕಶೀಹಿ- ಚೆನ್ನಾಗಿ ರಕ್ಷಿಸು.) ಇಂತೆಂದು ವೇದಪುರುಷನೇ ಲಿಂಗಧಾರಣೆಯಂ ಬೇಡಿ ಕೊಂಡನಾಗಿ ವೀರಶೈವವ್ರತವೇ ಮೋಕ್ಷಕ್ಕೆ ಕಾರಣವೆಂಬುದರ್ಥಂ.

ಮತ್ತಂ ಶಾಂಕರಸಂಹಿತೆಯಲ್ಲಿ— "ಯೋ ಹಸ್ತಪೀಠೇ ನಿಜಲಿಂಗಮಿ ಷ್ಟಂ ವಿನ್ಯಸ್ಯ ತಲ್ಲೀನಮನಃಪ್ರಚಾರಃ । ಬಾಹ್ಯಕ್ರಿಯಾಸಂಗವಿವರ್ಜಿತಾ ತ್ಮಾ ಸಂಪೂಜಯುತ್ಯಂಗ ಸ ವೀರಶೈವಃ" (ಹೇ ಅಂಗ-ಎಲೈ ಪುತ್ರನಾದ ಷಣ್ಮುಖನೇ, ಯಃ-ಆವನಾನೊರ್ವ ಪುರುಷನು, ಇಷ್ಟಂ-ಗುರುವಿನಿಂ

ದ ಪೂಜೆಸಿಕೊಡಲ್ಪಟ್ಟ, ನಿಜಲಿಂಗಂ—ತನ್ನ ಇಷ್ಟಲಿಂಗವನ್ನು, ಹಸ್ತಪೀಠೇ—ಹಸ್ತವೆಂಬ ಪೀಠದಲ್ಲಿ,, ವಿನ್ಯಸ್ಯ-ಇರಿಸಿ, ತತ್ರ—ಆ ಮಹಾಲಿಂಗದಲ್ಲಿ, ಲೀನ–ಅಡಗಿದಂಥ, ಮನಃ–ಮನಸ್ಸಿನ, ಪ್ರಚಾರಃ–ಸಂಚಾರವುಳ್ಳಾತನಾಗಿ, ಬಾಹ್ಯಕ್ರಿಯಾಸಂಗವಿವರ್ಜಿತಾತ್ಮಾ—ಬಾಹ್ಯಕ್ರಿಯೆಗಳಸಂಗವಿಲ್ಲದಾತನಾಗಿ, ಸಂಪೂಜಯತಿ—ಪೂಜೆಸುತಿಹನು, ಸಃ–ಆತನು, ವೀರಶೈವಃ–ವೀರಶೈವನೆನಿಸಿಕೊಳ್ಳುವನು.) ಇಂತೆಂಬ ಈಶ್ವರನ ವಾಕ್ಯಮುಂಟಾಗಿ, ಇತರ ಮತಂಗಳೆಲ್ಲಕ್ಕಂ ಬಾಹ್ಯಕ್ರಿಯೆಯಿಲ್ಲದಿರ್ದೊಡೆ ಗತಿಯಿಲ್ಲವಾಗಿ ವೀರಶೈವಂಗೆ ದಗ್ಧಪಟನ್ಯಾಯದಿಂದೆ ಬ್ಯಾಹ್ಯಕ್ರಿಯೆ ಬೇಕಾದೊಡೆ ಬೇಕು ಬೇಡವಾದೊಡೆ ಬೇಡವಾಗಿ ಇಹದಲ್ಲಿಯೇ ಜೀವನ್ಮುಕ್ತನೆಂಬುದರ್ಥಂ.

ಮತ್ತಂ ಗಾರುಡಪುರಾಣದಲ್ಲಿ— "ವಂಶಾವಳೀಪ್ರಯಾತಾನಾಂ ಲಿಂಗಧಾರಣಶಾಲಿನಾಂ ।.ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವಂ ನೈವ ವಿದ್ಯತೇ" (ವಂಶಾವಳೀಪ್ರಯಾತಾನಾಂ—ಸಂಪ್ರದಾಯಶುದ್ಧರಾದ, ಲಿಂಗಧಾರಣಶಾಲಿನಾಂ—ಲಿಂಗಧಾರಣಸಂಪನ್ನರಾದ, ಜ್ಞಾನಿನಾಂ—ಜ್ಞಾನಿಗಳಾದ, ಶಿವಭಕ್ತಾನಾಂ-ಶಿವಭಕ್ತರ್ಗೆ, ಶೂದ್ರತ್ವಂ-ಶೂದ್ರತ್ವವು, ನೈವ ವಿದ್ಯತೇ—ಇಲ್ಲವೇ ಇಲ್ಲ.)

"ನಮಕೇ ಚಮಕೇ ಪಂಚಬ್ರಹ್ಮಮಂತ್ರಾದಿವೈದಿಕೇ। ತೇಷಾಮಪ್ಯಧಿಕಾರೋಸ್ತಿ ಶಿವದೀಕ್ಷಾಪ್ರಭಾವತಃ" (ತೇಷಾಂ—ಆಶಿವಭಕ್ತರ್ಗೆ, ಶಿವದೀಕ್ಷಾಪ್ರಭಾವತಃ—ಶಿವದೀಕ್ಷೆಯ ಪ್ರಭಾವದತ್ತಣಿಂದೆ, ನಮಕೇ—ಶ್ರೀರುದ್ರಮಂತ್ರದಲ್ಲಿಯೂ, ಚಮಕೇ—ಚಮಕಮಂತ್ರದಲ್ಲಿಯೂ, ಪಂಚಬ್ರಹ್ಮಮಂತ್ರಾದಿವೈದಿಕೇ—ಪಂಚಬ್ರಹ್ಮ ಮೊದಲಾದ ಸಮಸ್ತ ವೇದಾಧ್ಯಯನಂಗಳಲ್ಲಿಯೂ, ಅಧಿಕಾರಃ-ಅಧಿಕಾರವು, ಅಸ್ತಿ-ಉಂಟು.)

"ಲಿಂಗಾರ್ಚನರತಾ ನಾರೀ ರಜಸ್ಸೂತಕಸಂಯುತಾ। ರವಿರಗ್ನಿರ್ಯಥಾ ವಾಯುಸ್ತದ್ವತ್ಕೋಟಿ ಶುಚಿರ್ಭವೇತ್" (ಲಿಂಗಾರ್ಚನರತಾ—ಇಷ್ಟಲಿಂಗಾರ್ಚನೆಯಲ್ಲಿ ಆಸಕ್ತಿಯನುಳ್ಳ, ನಾರೀ—ಸ್ತ್ರೀಯು, ರಜಸ್ಸೂತಕಸಂಯುತಾ—ರಜಸ್ಸಿನ ಸೂತಕದೊಡನೆ ಕೂಡಿದವಳಾದರೂ, ರವಿಃ—ಸೂರ್ಯನು, ಅಗ್ನಿಃ—ಅಗ್ನಿಯು, ವಾಯುಃ—ವಾಯುವು, ಯಥಾ—ಹ್ಯಾಗೋ, ತದ್ವತ್—ಅವರೋಪಾದಿಯಲ್ಲಿ, ಕೋಟಿಶುಚಿಃ—ಕೋಟಿಮಡಿ ಶ್ರೇಷ್ಠ

ಳವಾಗಿ ಪರಿಶುದ್ಧಿಯುಳ್ಳವಳು, ಭವೇತ್—ಅಹಳು.) ವೀರಶೈವರ್ಗೆ ಲಿಂಗಪೂಜಾವಿಷಯದಲ್ಲಿ ಪಂಚಸೂತಕಾದಿಗಳಿಲ್ಲವೆಂಬುದರ್ಥ. ಅದುಕಾರಣದಿಂದೆ ಜೀವನ್ಮುಕ್ತರೆಂಬುದರ್ಥ.

“ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರಿ । ಇತರೇಷಾಂತು ಶೈವಾನಾಂ ಮುಕ್ತಿರ್ಜನ್ಮತ್ರಯೇ ಭವೇತ” (ಮಹೇಶ್ವರಿ—ಪಾರ್ವತೀದೇವಿಯೇ, ವೀರಾಣಾಂತು—ವೀರಶೈವರ್ಗೆ, ಏಕೇನ ಜನ್ಮನಾ—ಒಂದು ಜನ್ಮದಿಂದೆ, ಮುಕ್ತಿಃ—ಮೋಕ್ಷವು, ಭವೇತ್—ಅಹುದು, ಇತರೇಷಾಂತು—ಬೇರೆಯಾದಂಥ, ಶೈವಾನಾಂ—ಶೈವರ್ಗೆ, ಮುಕ್ತಿಃ—ಮೋಕ್ಷವು, ಜನ್ಮತ್ರಯೇ—ಮೂಱುಜನ್ಮಂಗಳಲ್ಲಿ, ಭವೇತ್—ಅಹುದು.) ಇಂತೆಂದು ಕಾಮಿಕಾದಿವಾತುಲಾಂತ್ಯವಾದಾಗಮಂಗಳಲ್ಲಿ ಮಹಾದೇವನಿಂದ ಪೇೞಲ್ಪಟ್ಟತಾಗಿ; *“ಕಾಮಿಕಾದ್ಯಾ ವಾತುಲಾಂತಾ ಶೈವೇನೋಕ್ತಾ ಶೈವಾಗಮಾಃ । ಸಿದ್ಧಾಂತಾ ಇತಿ ವಿಜ್ಞೇಯಾಃ ವೀರಶೈವಸ್ಯ ನಿಶ್ಚಯಾತ್” “ತ್ರಿಪದಾರ್ಥಂ ಚತುಷ್ಪಾದಂ ಮಹಾತಂತ್ರಂ ಜಗತ್ಪತಿಃ । ಪ್ರೋಕ್ತವಾನ್ ಹಿಮವತ್ಪುತ್ರ್ಯೈ ಧರ್ಮಾನ್ ಮೋಕ್ಷೈಕಸಾಧನಾನ್” (ಜಗತ್ಪತಿಃ—ಜಗದೀಶನಾದವನು, ತ್ರಿಪದಾರ್ಥಂ—ಪಶು ಪತಿ ಪಾಶ ಎಂಬ ಮೂಱು ಪದಾರ್ಥಂಗಳುಳ್ಳ, ಚತುಷ್ಪಾದಂ—ಕ್ರಿಯಾ ಚರ್ಯಾ ಯೋಗ ಜ್ಞಾನ ಎಂಬ ನಾಲ್ಕು ಭಾಗಂಗಳುಳ್ಳ, ಮಹಾತಂತ್ರಂ—ಶೈವಸಿದ್ಧಾಂತವನ್ನೂ, ಮೋಕ್ಷೈಕಸಾಧನಾನ್—ಮುಕ್ತಿಗೆ ಮುಖ್ಯಸಹಾಯಕಂಗಳಾದ, ಧರ್ಮಾನ್—ವೀರಶೈವಧರ್ಮಂಗಳನ್ನೂ, ಹಿಮವತ್ಪುತ್ರ್ಯೈ—ಪಾರ್ವತೀದೇವಿಗೋಸ್ಕರ, ಪ್ರೋಕ್ತವಾನ್—ಪೇೞಿದನು.) ಇಂತೆಂದು ಸೂತಸಂಹಿತೆಯಲ್ಲಿ ವ್ಯಾಸವಾಕ್ಯಮುಂಟಾಗಿ; “ವಿಶ್ವಾಧಿಕೋ ರುದ್ರೋ ಮಹರ್ಷಿಃ” ಎಂದು ಸಮಸ್ತಋಷಿಗಳ್ಗೆ ಒಡೆಯನಾದ ರುದ್ರನಿಂದ ಪೇೞಲ್ಪಟ್ಟ ಶಿವಾಗಮಂಗಳನ್ನು ಮೋಹಶಾಸ್ತ್ರಂಗಳೆಂದಾಡುವರ [ಕೆಲರ್]. ಆ ರುದ್ರನೇ ದೈವವೆಂದು

* (ಕಾಮಿಕಾದ್ಯಾಃ—ಕಾಮಿಕತಂತ್ರವೇ ಮೊದಲಾಗಿ, ವಾತುಲಾಂತಾಃ—ವಾತುಲತಂತ್ರವೇ ಕೊನೆಯಾಗುಳ್ಳ, ಶಿವೇನೋಕ್ತಾಃ—ಶ್ರೀ ರುದ್ರನಿಂದ ಪೇೞಲ್ಪಟ್ಟ, ಶಿವಾಗಮಾಃ—ಶೈವಾಗಮಗಳೆಲ್ಲವೂ, ವೀರಶೈವಸ್ಯ—ವೀರಶೈವನಿಗೆ, ನಿಶ್ಚಯಾತ್—ನಿಶ್ಚಯದಿಂದ, ಸಿದ್ಧಾಂತಾಇತಿ—ಸಿದ್ಧಾಂತಂಗಳೆಂದು, ವಿಜ್ಞೇಯಾಃ—ತಿಳಿಯಲ್ಪಡತಕ್ಕವು.)

ಪ್ರೂಜೆಗೆಯ್ದೊಡಂ ಆ ರುದ್ರವಾಕ್ಯಂಗಳಂ ನಂಬದಿರ್ಪ ವಿಪ್ರರ್ಗೆ ಭವಭವಾಂತರದಲ್ಲಿಯುಂ ನರಕ ತಪ್ಪದು.

ಮತ್ತಂ "ಅಪಿವಾ ಯಶ್ಚಂಡಾಲಃ ಶಿವೇತಿ ವಾಚಂ ವದೇತ್ತೇನ ಸಹ ಸಂವಸೇತ್ತೇನ ಸಹ ಸಂವಿಶೇತ್ತೇನ ಸಹ ಭುಂಜೀತ ತೇನ ಸಹ ಭುಂಜೀತ" ಎಂದು ಶಿವಭಕ್ತಿ ಹೀನನಾದ ವಿಪ್ರನಿಗಿಂತಲೂ ಶಿವಭಕ್ತಿಯುಳ್ಳ ಚಂಡಾಲನೇ ಉತ್ತಮನೆಂಬ ಶ್ರುತಿಯನೋದದೆ ಶಿವಭಕ್ತರಂ ದೂಷಿಸುತ್ತಿರ್ಪ ವಿಪ್ರರ್ಗೆ ಅವರಿದ್ದುದೇ ನರಕಲೋಕವೆಂದು ನಿರ್ಣಯಿಸಲ್ಪಟ್ಟುತಾಗಿ, ಇಂತಪ್ಪ ಸದ್ಯೋಮುಕ್ತಿಪ್ರದಮಾದ ವೀರಶೈವಮಾರ್ಗದಲ್ಲಿ ಅನುವರ್ತಿಸುತ್ತುಂ ಜೀವೇಶ್ವರರ ಅಭೇದಮಂ ತಿಳಿದು ಪ್ರೂಜಾನಿಮಿತ್ತಮಾಗಿ ಭಕ್ತಿಯಂ ತಳೆದು ಭಕ್ತಿಯಿಂದೆ ಮುಕ್ತಿಯನನುಗ್ರಹಿಸಿ "ಏಕಏವ ರುದ್ರೋ ನ ದ್ವಿತೀಯಾಯ ತಸ್ಥೇ ಶಿವ ಏಕೋಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ" ಎಂಬಥರ್ವಶಿಖಾರ್ಥಮಂ ದೃಢೀಕರಿಸಿ, ಸಮಸ್ತ ವಿಷ್ಣುಬ್ರಹ್ಮಾದಿಗಳಂ ಶ್ರುತ ದೃಷ್ಟ ಅನುಮಾನಂಗಳಿಂ ದೈವಮಲ್ಲವೆಂಬುದಂ ಸ್ವಾತ್ಮಾನುಭವದಿಂ ತಿಳಿದು, ನಿಜಮೋಕ್ಷಮಂ ಪಡೆವುದೆಂಬುದೀ ಸೂತ್ರದ ಬಹುಶಬ್ದ ನಿರ್ವಚನಾರ್ಥಂ. ॥೨೭॥

॥ ಗದ್ಯಂ ॥

ಇದು ಹರಿವಿಧಿಮುಖಸುರವಿಸರವಿರಾಜನ್ಮಸ್ತಕನ್ಯಸ್ತನೂತ್ನರತ್ನ ಗಭಸ್ತಿವಿಸರಸರಃಪದ್ಮಾಯಮಾನಂ ಅಗಜಾವಲ್ಲಭ ಪಾದಪಂಕಜಲಸದ್ರೋಲಂಬನಪ್ಪ, ಹರಗುರುಚರಣಸೇವಾಧುರಂಧರನಪ್ಪ, ಪರಮತವೇಶ್ಯಾಭುಜಂಗನೆನಿಪ ಬಿರುದನಾಂತ,

ಸತ್ಕವಿ ನೀಲಕಂಠಾರ್ಯ

ವಿರಚಿತಮಪ್ಪ

ಪರವಾದಿ ಗಜಾಂಕುಶ ತಾರಾವಳಿ

ಸಮಾಪ್ತಂ.

---

ಪರವಾದಿಗಜಾಂಕುಶಮೆಂ ।
ಬುರುತಾರಾವಳಿಯ ನೀಲಕಂಠಾರ್ಯಂ ತಾಂ ॥
ಬರೆದನಿದನೋದುವಂಗಾ ।
ಪರಿಭವವಿಲ್ಲಮುಮನೋಡಲಿದು ವೇದಾರ್ಥಂ॥

